ಶ್ರೀಮನ್ನಿಡುಮಾಮಿಡಿ ಶ್ರೀಶೈಲಸೂರ್ಯಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ. ಶ್ರೀ. ಚೆನ್ನಬಸವರಾಜ ದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು
ಶುಭಾಶೀರ್ವಾದಗಳಿಂದ ಹರಸಿದ

# ಶ್ರೀ ಶಿವಲಿಂಗಸಂಗತರಂಗ

( ಕವನ ಸಂಗ್ರಹ )

ಕವನಕಾರರು
ಶ್ರೀ ಶಿವಲಿಂಗಪ್ಪ ಸಂಗನಬಸಪ್ಪ ಹೆರಲಗಿ

ಸಂಪಾದಕರು
ಶ್ರೀ ಪದ್ಮರಾಜ ಹುನಗುಂದ



**ಶ್ರೀ ಪದ್ಮರಾಜ ಹುನಗುಂದ ( ಎಚ್. ಪದ್ಮರಾಜ್ )**

ಇವರು ಕಲೆ, ಇತಿಹಾಸ ಮತ್ತು ಸಾಹಿತ್ಯದ ಅಧ್ಯಯನದಲ್ಲಿ ಆಸಕ್ತಿ-ಪ್ರೀತಿ-ಭಕ್ತಿಯುಳ್ಳವರಿದ್ದು "ಬಂಧನದ ಆಚೆ", "ರವೀಂದ್ರನಾಥ ಠಾಕೂರರ ಚರಿತ್ರೆ," "ರವೀಂದ್ರನಾಥ ಠಾಕೂರರ ಗೀತಸಂಗ್ರಹ", "ಬಂಧನದ ಆಚೆ," "ಸ್ವಾಮಿ ವಿವೇಕಾಂದ" ಮುಂತಾದ ಕೃತಿಗಳನ್ನು ಕನ್ನಡಿಗರ ಅಡಿಯಲ್ಲಿ ಅರ್ಪಿಸಿರುವರು.

ಇವರ ಇತ್ತೀಚಿನ ಕೃತಿಗಳು—

"The Glory that is Bijapur."

"ವಿಜಾಪುರ ವೈಭವ ದರ್ಶನ."

"The Glory that is Aiholli–Badami and Pattadkal."

"ಐಹೊಳ್ಳಿ-ಬಾದಾಮಿ-ಪಟ್ಟದಕಲ್ಲು ಇಲ್ಲಿ ಕಂಗೊಳಿಸುವ ಭಾರತೀಯ ಶಿಲ್ಪಕಲೆಯ ವೈಭವದರ್ಶನ"

ಈ ಕೃತಿಗಳ ಬಗ್ಗೆ ಬಂದ ಕೆಲ ಅಭಿಪ್ರಾಯಗಳು :

"Valuable books, interesting books."
—Dr. S. Radhakrishnan

"Read the books, find them interesting and instructive".
—Dr. Zakir Husain

( ಬೆಲೆಯುಳ್ಳ ಉದ್ಬೋಧಕ ಮತ್ತು ರಂಜಿಸುವ ಪುಸ್ತಕಗಳು )

ಶ್ರೀಮನ್ನಿಡುಮಾಮಿಡಿ ಶ್ರೀಶೈಲಸೂರ್ಯಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ. ಶ್ರೀ. ಚೆನ್ನಬಸವರಾಜ ದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು
ಶುಭಾಶೀರ್ವಾದಗಳಿಂದ ಹರಸಿದ

# ಶ್ರೀ ಶಿವಲಿಂಗಸಂಗತರಂಗ

(ಕವನ ಸಂಗ್ರಹ)

ಕವನಕಾರರು
ಶ್ರೀ ಶಿವಲಿಂಗಪ್ಪ ಸಂಗನಬಸಪ್ಪ ಹೆರಲಗಿ

ಸಂಪಾದಕರು
ಶ್ರೀ ಪದ್ಮರಾಜ ಹುನಗುಂದ

# ಅನುಕ್ರಮಣಿಕೆ (ಪ್ರಾಸ್ತಾವಿಕ)

# ಶ್ರೀಶಿವಲಿಂಗಸಂಗತರಂಗ

## ಅನುಕ್ರಮಣಿಕೆ

## ೪. ಅಂತರಾತ್ಮನಿಗಾಗಿ



## ೫. ಪರಮಾತ್ಮನಿಗಾಗಿ



---

# ಸಂಪಾದಕರ ನಿವೇದನೆ

ಕಳೆದ ಮೂವತ್ತುಮೂರು ವರ್ಷಗಳಿಂದ ನಾನು ಶ್ರೀ ಶಿವಲಿಂಗಪ್ಪ ಹೇರಲಗಿ ಯವರನ್ನು ಬಲ್ಲೆನು. ಅವರು ನನ್ನ ದಿವಂಗತ ತಂದೆಯವರ ಆಪ್ತಸ್ನೇಹಿತರು. ನನ್ನ ವಿಷಯವಲ್ಲಿ ಸ್ನೇಹವನ್ನು ತಳೆದ ಹಿರಿಯರು.

**ಒಕ್ಕಲಿಗನ ತಮ್ಮ :** ತಮ್ಮ ಮನೆತನದ ಹಿರಿಯ ಬೇಸಾಯವಾದ ಒಕ್ಕಲು ತನವನ್ನು ಹೊಸ ವಿಚಾರ ಯಂತ್ರತಂತ್ರ, ಪರಿಶ್ರಮಗಳಿಂದ ಸುಧಾರಿಸಿ, ಬೆಳೆತೆನೆ ಹೂಹಣ್ಣುಕಾಯಿಗಳಿಗಾಗಿ ಹಲವಾರು ಪಾರಿತೋಷಕಗಳನ್ನು ಪಡೆದು, ಒಕ್ಕಲಿಗ-ರಣ್ಣಂದಿರಿಗೆ ಆದರ್ಶ ಒಕ್ಕಲಿಗರಾಗಿ, ಅವರ ಸರ್ವಾಂಗೀಣ ಉನ್ನತಿಗಾಗಿ ಕಷ್ಟಪಟ್ಟು, "ಒಕ್ಕಲಿಗನ ಕೈಪಿಡಿ" ಎಂಬ ಪುಸ್ತಕವನ್ನು ತಜ್ಞರಿಂದ ಬರೆಯಿಸಿ ಅದರ ಸಾವಿರಾರು ಪುಸ್ತಕಗಳನ್ನು ಒಕ್ಕಲಿಗರಲ್ಲಿ ಪುಕ್ಕಟೆಯಾಗಿ ಹಂಚಿದ ಶ್ರೀ ಶಿವಲಿಂಗಪ್ಪನವರು ತಮ್ಮನ್ನು "ಒಕ್ಕಲಿಗನ ತಮ್ಮ" ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.

**ವ್ಯಾಪಾರಸ್ಥ :** ಕೇವಲ ಐದು ಸಾವಿರ ರೂಪಾಯಿಗಳ ಬಂಡವಾಳದಿಂದ ಇಪ್ಪತ್ತೊಂದು ವರ್ಷದ ಎಳೆ ಹರೆಯದಲ್ಲಿ ಹೊಸದಾಗಿ ಜವಳಿ ಅಂಗಡಿಯನ್ನು ಸ್ಥಾಪಿಸಿ, ಶ್ರೀ ಶಿವಲಿಂಗಪ್ಪನವರು ವ್ಯಾಪಾರದ ಮರ್ಮವನ್ನು ಚೆನ್ನಾಗಿ ಅರಿತು ಕೊಂಡು, ಪರಿಶ್ರಮ,ಪ್ರಾಮಾಣಿಕತೆ,ದೂರದರ್ಶಿಕತೆ, ವ್ಯವಹಾರಕುಶಲತೆ ಮುಂತಾದವುಗಳ ಬಲದಿಂದ ಇಪ್ಪತ್ತೈದು ವರ್ಷಗಳಲ್ಲಿ "ಎಸ್. ಎಸ್. ಹೆರಲಗಿ" ಎಂಬ ಜವಳಿ ಅಂಗಡಿಯು ಯಶಸ್ವಿಯಾಗಿ ದೂರದೂರದ ವರೆಗೂ ಹೆಸರಾಗಿ, ಲಕ್ಷಾಂತರ ಬಂಡವಾಳವನ್ನು ಶೇಖರಿಸಿ ವ್ಯಾಪಾರವನ್ನು ವಿಸ್ತರಿಸಿ, ವರ್ಚಸ್ವಿಯಾದ ವ್ಯಾಪಾರಸ್ಥರೆಂದು ಕೀರ್ತಿಯನ್ನು ಗಳಿಸಿ ಅಂಗಡಿಯ ರಜತಸಮಾರಂಭವನ್ನು ೧೯೩೭ ರಲ್ಲಿ ಜರುಗಿಸಿದಾಗ ೪೫,೦೦೦ ರೂಪಾಯಿಗಳ ಕಾಣಿಕೆಗಳನ್ನು ಸಾರ್ವಜನಿಕ ಸಂಘ ಸಂಸ್ಥೆಗಳಿಗೆ ಕೊಟ್ಟು ಕೃತಕೃತ್ಯರಾದರು. ಆಗ ವಿಜಾಪುರದ ಮತ್ತು ದೂರದೂರದ ಹಿರಿಯ ವಣಿಕ್ ಶ್ರೇಷ್ಠರು ಮತ್ತು ಜವಳಿ ಕಾರಖಾನೆದಾರರು ಅವರಿಗೆ ಹಲವಾರು ಕಾಣಿಕೆಗಳನ್ನು ಸಲ್ಲಿಸಿದರು. "ಎಸ್.ಎಸ್. ಹೆರಲಗಿ" ಅಂಗಡಿಯ ಸುವರ್ಣಮಹೋತ್ಸವವೂ ಶ್ರೀ. ಬಂಥನಾಳ ಶಿವಯೋಗಿಗಳ ಸನ್ನಿಧಿಯಲ್ಲಿ ೧೯೬೨ರಲ್ಲಿ ಜರುಗಿತು.

ತಮ್ಮ ನಾಗಲಿಕ ಸಮಾಜವು ವ್ಯಾಪಾರವಲ್ಲಿ ಮುಂದುವರೆಯಲು ಅನುಕೂಲ ವಾಗಬೇಕೆಂದು 'ಜಡೆಯ ಶಂಕರಲಿಂಗ ಬ್ಯಾಂಕ" ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಶ್ರೀ ಶಿವಲಿಂಗಪ್ಪನವರು ೧೯೫೩ ರಲ್ಲಿ ಒಂದು ಲಕ್ಷ ರೂಪಾಯಿಗಳ ನಿಧಿ ಯನ್ನು ವಿಶ್ವಸ್ತರ ಸ್ವಾಧೀನಪಡಿಸಿದರು.

ಈ ರೀತಿ ಒಕ್ಕಲಿಗರಾಗಿ ಮತ್ತು ವ್ಯಾಪಾರಸ್ಥರಾಗಿ ಶ್ರೀ ಶಿವಲಿಂಗಪ್ಪನವರು ತಾವು ಮುಂದುವರೆದುದಲ್ಲದೆ ಪರರನ್ನು ಅನೇಕರನ್ನು ತಮ್ಮ ಸಮಾಜವನ್ನು ಮುಂದೆ ತರಲು ಪರಿಶ್ರಮಪಟ್ಟಿರುತ್ತಾರೆ.

**ಕಲಾಪ್ರೇಮಿ :** ಕಲಾನಿಕೇತನವಾಗಿ ಅವರು ಕಟ್ಟಿಸಿದ ಮನೆಯನ್ನು ಕಂಡು ಮತ್ತು ಕಲಾಕಾರರಿಗೆ ಕಲೆಗಳಿಗೆ ಅವರು ತೋರುತ್ತಿದ್ದ ಸಕ್ರಿಯ ಸಹಾಯ ಸಹಾನುಭೂತಿಗಳನ್ನು ಅರಿತು ಮತ್ತು ಮುಂದಾದರೂ ಅವರ ಮನೆಯಲ್ಲಿ ಕುಶಲ ಕಲೆಗಳನ್ನು ಕಲಿಸುವ ಕಲಾಶಾಲೆಯೊಂದರ ಸ್ಥಾಪನೆಯಾಗಬೇಕೆಂಬ ಅವರ ಸಂಕಲ್ಪವನ್ನು ತಿಳಿದು ನಾನು ಸಂತೋಷಪಟ್ಟಿದ್ದೇನೆ.

**ಸಾಹಿತ್ಯಪ್ರೇಮಿ:** ಇದೇ ತೆರನಾಗಿ ಸಾಹಿತ್ಯಕ್ಕೆ ಸಾಹಿತಿಗಳಿಗೆ ಸಕ್ರಿಯ ಸಹಾನುಭೂತಿ ಪ್ರೋತ್ಸಾಹನೆಯನ್ನು ನೀಡಿದ ಮತ್ತು ನೀಡುತ್ತಿದ್ದ ಶ್ರೀ ಶಿವಲಿಂಗಪ್ಪನವರನ್ನು ಸಾಹಿತ್ಯಪ್ರೇಮಿ ರೂಪದಲ್ಲಿಯೂ ಕಂಡು ನನಗೆ ಸಂತಸವಾಗಿದೆ.

**ಧಾರ್ಮಿಕ-ಆಧ್ಯಾತ್ಮಿಕ-ಸಾಧಕ:** ನವಲಿ ಶಂಕರಲಿಂಗನಿಂದ ವರವ ಪಡೆದ ಮಹಾಮಹಿಮ ಶಂಕರದಾಸಿಮಯ್ಯನ ವಂಶಜರಾದ ಶ್ರೀ ಹೇರಲಗಿ ಮನೆತನದ ಹಿರಿಯರು ಅಥಣಿಯ ಶ್ರೀ ಮುರುಘಾರಾಜೇಂದ್ರ ಶಿವಯೋಗಿ ಶ್ರೇಷ್ಠರಿಂದ ಶುಭಾನುಗ್ರಹವನ್ನು ಪಡೆದಿರುವರು. ಇಂಥ ಪರಂಪರೆ, ಸಂಸ್ಕಾರ, ಸತ್ಸಹವಾಸ ಇವುಗಳಿಂದ ಶ್ರೀ ಹೇರಲಗಿಯವರ ಹುಟ್ಟುಗುಣಗಳಾದ ಸೇವಾಬುದ್ಧಿ, ಧರ್ಮಾಭಿಮಾನ ಆಧ್ಯಾತ್ಮದೃಷ್ಟಿ ಇವೆಲ್ಲ ಬೆಳೆಯುತ್ತ ಬಂದಿವೆ. ಅವರು ದ್ವಾದಶ ಜ್ಯೋತಿರ್ಲಿಂಗ ಕ್ಷೇತ್ರಗಳ ಯಾತ್ರೆಯನ್ನು ಪೂರೈಸಿರುವರು. ಅವರ ಸಮಾಜಸೇವೆಯಿಂದ ಸುಪ್ರೀತರಾದ ಪುಣೆಯ "ಗೋವರ್ಧನ ಸಂಸ್ಥೆ"ಯವರು ಅವರಿಗೆ "ದಾನಶೂರ" ಎಂಬ ಪ್ರಶಸ್ತಿಯನ್ನಿತ್ತರು. ಧಾರ್ಮಿಕ ಸೇವಾ ಸತ್ಕಾರ್ಯಗಳಿಗಾಗಿ ಮತ್ತು ಕೋಟಿಜಪ ಮುಂತಾದ ಆಧ್ಯಾತ್ಮ ಸಾಧನೆಗಳಿಗಾಗಿ ಅವರು ಕಾಶೀ ಕ್ಷೇತ್ರದ ಜಗದ್ಗುರು ವಿಶ್ವಾರಾಧ್ಯ ಪೀಠದ ಶ್ರೀ ವಿಶ್ವೇಶ್ವರ ಶಿವಾಚಾರ್ಯರಿಂದ "ಧರ್ಮಧುರಂಧರ" ಎಂಬ ಶುಭಾಭಿನಂದನ ಪತ್ರವನ್ನು ಅಲ್ಲಿಯ ಜಗದ್ಗುರುಗಳಿಂದ ಮತ್ತು ಬಹುಜನ ಪಂಡಿತರಿಂದ ಶುಭಾಶೀರ್ವಾದ ಪತ್ರಿಕೆಯನ್ನು ಮತ್ತು ಶುಭಾಭಿನಂದನ ಕವನಪತ್ರಿಕೆಗಳನ್ನು ಶ್ರೀ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸವರಾಜ ದೇಸಿಕೇಂದ್ರ ಶಿವಾಚಾರ್ಯರಿಂದ "ಧರ್ಮಧುರೀಣ" ಎಂಬ

ಶುಭಾಭಿನಂದನ ಪ್ರಶಸ್ತಿಯನ್ನು ಮತ್ತು ಚಿತ್ರದುರ್ಗದ ಜಗದ್ಗುರುಗಳಿಂದ "ಸದಾಚಾರ ಪ್ರದೀಪಕ" ಎಂಬ ಶುಭಾಶೀರ್ವಾದ ಪ್ರಶಸ್ತಿಯನ್ನೂ ಪಡೆದು ಕೃತಾರ್ಥರಾಗಿದ್ದಾರೆ.

ಹೀಗೆ "ಒಕ್ಕಲಿಗನ ತಮ್ಮ", "ವ್ಯಾಪಾರಸ್ಥ", "ಕಲಾಪ್ರೇಮಿ". "ಸಾಹಿತ್ಯ ಪ್ರೇಮಿ", "ಧಾರ್ಮಿಕ-ಆಧ್ಯಾತ್ಮಿಕ-ಸಾಧಕ" ಮತ್ತು ನನ್ನ ಆವರದ ಆತ್ಮೀಯ ಹಿರಿಯರು ಮುಂತಾದ ಹಲವಾರು ದೃಷ್ಟಿಗಳಿಂದ ನಾನು ಶ್ರೀ.ಶಿವಲಿಂಗಪ್ಪನವರನ್ನು ಕಣ್ಣಾರೆ ಕಂಡಿದ್ದೇನೆ, ಮನವಾರೆ ಮನ್ನಿಸಿದ್ದೇನೆ ಮತ್ತು ಹೃದಯಾರೆ ಹರ್ಷಿಸಿದ್ದೇನೆ.

ಇತ್ತೀಚೆ, ಈ ಮೂರು-ನಾಲ್ಕು ವರ್ಷಗಳಿಂದ ಹಲಕೆಲವು ಸಂದರ್ಭಗಳಲ್ಲಿ ಅವರ ಮತ್ತು ನನ್ನ ಸಂಬಂಧವು ಅತ್ಯಂತ ನಿಕಟವಾಯಿತು. ಹಾರ್ದಿಕ ಸ್ನೇಹ ದಲ್ಲಿ ಪರಿಣಮಿಸಿತು. ಈ ಸ್ನೇಹದ ಸಲುಗೆಯಲ್ಲಿ ಸಥಿಯಿಂದ ಶ್ರೀ ಶಿವಲಿಂಗಪ್ಪನ-ವರು ತಮ್ಮ ವ್ಯಕ್ತಿಜೀವನದ ವಿಷಯವಾಗಿ ಅಂತರಂಗದ ಹಲವಾರು ಮಾತುಗಳನ್ನು ನನಗೆ ಹೇಳಿದರು. ಮತ್ತು ಆಗಾಗ ತಾವು ಬರೆದ ಕೆಲವು ಕವನಗಳ ಕೈಬರಹದ ಪ್ರತಿಯೊಂದನ್ನು ನನ್ನ ಕೈಗೆ ಕೊಟ್ಟರು. ಎನಗೆ ಒಳ್ಳೇ ಸೋಜಿಗವಾಯಿತು! ಅವರ ವ್ಯಕ್ತಿತ್ವದ ಈ ಮುಖವನ್ನು ಮಾತ್ರ ಹಿಂದೆ ನಾನೆಂದೂ ಕಂಡಿರಲಿಲ್ಲ! ಕುತೂಹಲಿ ಯಾಗಿ ನಾನು ಅವರ ಕವನಗಳನ್ನೆಲ್ಲ ಓದಿದೆನು! ನನ್ನ ಸೋಜಿಗವು ಮತ್ತೂ ಹೆಚ್ಚಿತು! ಅತ್ಯಂತ ಸಂತಸವೂ ಆಯಿತು! ಈ ಕವನಸಂಗ್ರಹವನ್ನು ಪ್ರಕಟಿಸಬೇ ಕೆಂದು ನಾನು ಸೂಚಿಸಿದೆನು. ಅವರು ಆಸ್ಥೆಯನ್ನು ತೋರಿಸಲಿಲ್ಲ. ಮತ್ತೆ ಮತ್ತೆ ನಾನು ಒತ್ತಾಯ ಪಡಿಸಹತ್ತಿದೆನು. ಕೊನೆಗೆ "ನೀವೇ ಏನು ಮಾಡುತ್ತೀರೋ ಮಾಡಿಕೊಳ್ಳಿರಿ" ಎಂದು ಅವರು ನನಗೆ ಹೇಳಿದರು. ಈ ಹಿನ್ನೆಲೆಯಲ್ಲಿ ಈ ಕವನ ಸಂಗ್ರಹವನ್ನು ನಾನು ಸಂಪಾದಿಸಿ ಪ್ರಕಟಿಸುತ್ತಿರುವೆನು.

ಈ ಕವನಗಳಲ್ಲಿ ಕೆಲವೆಡೆಗಳಲ್ಲಿ ಕೆಲಕೆಲವು ದೋಷಗಳಿಲ್ಲದಿಲ್ಲ. ಈ ಕವನ ಗಳನ್ನು ಪ್ರಕಟಿಸಬೇಕೆಂಬ ನನ್ನ ಕುತೂಹಲ ಮತ್ತು ಕೋರಿಕೆಗೆ ಕಾರಣವೆಂದರೆ: ಈ ಕವನಗಳಲ್ಲಿ ಒಂದು ಮಾನವಜೀವದ ಅಂತರಂಗಜೀವನವನ್ನು ರೂಪಿಸಿದ ಸಂಸಾ ರದ ನೋವು-ಕಾವು, ಸಿಹಿ-ಕಹಿ, ಸುಖ-ದುಃಖ, ಹರ್ಷ-ಹಂಬಲಗಳ ಹೋರಾಟದ ಪಡಿನೆಳಲು ಮೂಡಿದೆ. ಕವನಗಳನ್ನು ಕುತೂಹಲದಿಂದ ಕಾತುರತೆಯಿಂದ ಓದಿ ಮನನ ಮಾಡಿದಲ್ಲಿ ಓದುಗರು ನಿಸ್ಸಂದೇಹವಾಗಿಯೂ ಸಂತಸಪಡುವರು. ಈ ಕವನಗಳಲ್ಲಿ ಹಾಸುಹೊಕ್ಕಾಗಿರುವ ಧೀರತೆ, ಆಶಾವಾದ, ದಯೆ, ಮಾಯೆ, ಮಮತೆ, ಸೌಮನಸ್ಯ, ಸೌಜನ್ಯ, ಕ್ಷಮಾಶೀಲತೆ, ಹೃದಯದ ವಿಶಾಲತೆ, ಆತ್ಮಾರ್ಥಿಯ ಆರ್ತತೆ, ಭಕ್ತಿನಿರ್ಭರತೆ, ಸರ್ವಸ್ವಸಮರ್ಪಣೆ, ಶಿವಾನುಭವ ಮುಂತಾದ ತತ್ತ್ವ, ಭಾವ, ಭಾವನೆ, ಅನುಭವ ಇವುಗಳಿಂದ ಓದುಗರ ಮನಸ್ಸು ಬುದ್ಧಿ, ಹೃದಯ, ಆತ್ಮ ಗಳಲ್ಲಿ ಹೊಸದೊಂದು ಹುರುಪು ಹುಮ್ಮಸ್ಸು ಹೊರಹೊಮ್ಮಿ, ಬಾಳ ಬಟ್ಟೆಯ ಮೇಲೆ ಬೆಳಕು ಬಿದ್ದು, ವೀರರಾಗಿ ಧೀರರಾಗಿ ಬಾಳಿ ಬದುಕಬೇಕೆನ್ನುವ ಆಸೆ ಆಸ್ಥೆ ಆತ್ಮವಿಶ್ವಾಸ ಬಲಗೊಳ್ಳುತ್ತವೆ. ಯಾವ ನಿಜವಾದ ಹೃದ್ಯವಾದ ಗಣ್ಯವಾದ ಕಾವ್ಯ

ದಿಂದಲಾದರೂ ಸಾಹಿತ್ಯದಿಂದಲಾದರೂ ಯಾರಾದರೂ ಇನ್ನೇನನ್ನು ಬಯಸುವರು?

ನಿಡುಮಾಮಿಡಿಯ ಶ್ರೀಶೈಲಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸವರಾಜ ಯೋಗೀಶ್ವರರು ಈ "ಶಿವಲಿಂಗಸಂಗತರಂಗ"ವನ್ನು ತಮ್ಮ ಅಮೌಲ್ಯವಾದ ಶುಭಾಶೀರ್ವಾದದಿಂದ ಹರಸಿ ಕವನಕಾರರನ್ನು ಮತ್ತು ನನ್ನನ್ನು ಚಿರಋಣಿಗಳನ್ನಾಗಿ ಮಾಡಿರುವರು.

ಶ್ರೀ ಶಿವಲಿಂಗಪ್ಪನವರು ಶಿವಲಿಂಗದಲ್ಲಿ ಭಕ್ತಿಸಂಗಿಯಾಗಿ ಶಿವಾನುಭವದ ಮಾಧುರ್ಯಸೌಂದರ್ಯಭೌಮಾನಂದಗಳ ಧೀರೋದ್ಧಾರಕ ರಸಾಸ್ವಾದವನ್ನು ಸವಿಯುತ್ತಿರಲು ಅವರ ಅಂತರಂಗದಲ್ಲಿ ತರಂಗತರಂಗವಾಗಿ ಹೊರಹೊಮ್ಮಿದ ಕವನಗಳಿಗೆ "ಶ್ರೀ ಶಿವಲಿಂಗಸಂಗತರಂಗ" ವೆಂಬ ಹೆಸರು ನಿಜವಾಗಿಯೂ ಸಾರ್ಥಕವಾಗಿದೆಂಬ ವಿಷಯವನ್ನು ಮಾರ್ಮಿಕರಾದ ಓದುಗರು ಮನಗಾಣದಿರಲಾರರೆಂದು ಭಾವಿಸಿದ್ದೇನೆ.

"ಸ್ವಜನರಿಗಾಗಿ", ಆ ಮೇಲೆ "ಸುಜನರಿಗಾಗಿ", ನಂತರ "ತನ್ನವರಿಗಾಗಿ", ತದನಂತರ "ಅಂತರಾತ್ಮನಿಗಾಗಿ" ಮತ್ತು ಕೊನೆಯಲ್ಲಿ "ಪರಮಾತ್ಮನಿಗಾಗಿ" ಹೀಗೆ "ಶಿವಲಿಂಗಸಂಗತರಂಗ"ದಲ್ಲಿಯ ಭಾವನಾತರಂಗಗಳು ಬರಬರುತ್ತ ವಿಶಾಲವಾಗುತ್ತ ಕವನತರಂಗಗಳ ರೂಪದಲ್ಲಿ ತಲೆದೋರಿ,

"ನಿನ್ನ ನಡೆಗೆ ಅಮೃತ ನುಡಿಗೆ
ನನ್ನ ಮನವೆ ವಾಹನಾ
ಜನನ-ಮರಣ ಅರಿದ ಶರಣ
ನಮೋ ಮರಣಮಾರಣಾ"

ಎಂಬ ಕೊನೆಯ ಪದ್ಯದಲ್ಲಿ ಕೊನೆಗಂಡುದರಲ್ಲಿಯೂ ಎಷ್ಟು ಔಚಿತ್ಯವಿದೆಯೆಂಬ ಮಾತು ಮಾರ್ಮಿಕರೂ ಮತ್ತು ರಸಿಕರೂ ಆದ ಓದುಗರ ಸಹೃದಯತೆಗೆ ಸಂತಸವನ್ನು ಸಲ್ಲಿಸುವುದಲ್ಲವೇ ?

"ಶಾಂತಿನಿಕೇತನ"
ಮಹಾತ್ಮಾ ಗಾಂಧಿ ಬೀದಿ, ವಿಜಾಪುರ
ವಿಜಯಾ ದಶಮಿ, ವಿಶ್ವಾವಸು ಸಂವತ್ಸರ
ಶಕೆ: ೧೮೮೭

ಪದ್ಮರಾಜ ಹುನಗುಂದ




"ಎಸ್. ಎಸ್. ಹೇರಲಗಿ" ಜವಳಿ ಅಂಗಡಿಯ ತಮ್ಮ ಸರಿಗೆಲಸಗಾರರ ಜೊತೆಯಲ್ಲಿ
ಶ್ರೀ ಶಿವಲಿಂಗಪ್ಪನವರು ಮತ್ತು ಅವರ ಚಿರಂಜೀವರಾದ ಶ್ರೀ ಶಿವಯೋಗಪ್ಪನವರು




" ಎಸ್. ಎಸ್. ಹೆರಲಗಿ " ಜವಳಿ ಅಂಗಡಿಯ ರಜತಮಹೋತ್ಸವದ ಸಮಯದಲ್ಲಿ ಬಂದ ಕಾಣಿಕೆಗಳ ಸಹಿತ
ಶ್ರೀ ಶಂಕರಪ್ಪನವರು ಮತ್ತು ಶ್ರೀ ಶಿವಲಿಂಗಪ್ಪನವರು



ಹೊಸಮಠದ ಶ್ರೀ ಗುರುಗಳಿಗೆ, ಹಿರೇಮಠದ ಶ್ರೀಗಳವರಿಗೆ ಕ್ಷೇತ್ರ—ಭೂದಾನವನ್ನು ಮತ್ತು ಶ್ರೀ. ವೀರಪ್ಪ ಪಟ್ಟಣ ಮತ್ತು ಶ್ರೀ. ಶಿವಾನಂದ ಕವಿಶೆಟ್ಟಿ ಅವರಿಗೆ ಮನೆಗಳನ್ನು ದಾನ ಮಾಡುವ ಸಮಾರಂಭ



೨೨೦ ಮಂಟಪಪೂಜಾಸಂದರ್ಭದಲ್ಲಿ ಪ್ರಭುದೇವರ ಗದ್ದುಗೆಯ ಪ್ರತಿಷ್ಠಾಪನೆಯ ಸಮಯದಲ್ಲಿ ಹನ್ನೊಂದು ಜನ ಶಾಸ್ತ್ರಿಗಳು ಮಾಡುವ ಧಾರ್ಮಿಕ ವಿಧಿಯಲ್ಲಿ ಶ್ರೀ. ಶಿವಲಿಂಗಪ್ಪನವರು ಸೇವಾಭಾವವನ್ನು ವಹಿಸಿರುವ ಸನ್ನಿವೇಶ



ತಮ್ಮ ಜವಳಿಯ ಅಂಗಡಿಗೆ ಭಾರತದ ನಿವೃತ್ತ ಮಹಾದಂಡನಾಯಕ ಜನರಲ್ ಕಾರ್ಯಪ್ಪ ಅವರನ್ನು ಬರಮಾಡಿಕೊಂಡು
ಶ್ರೀ. ಶಿವಲಿಂಗಪ್ಪನವರು ಗೌರವಿಸುತ್ತಿದ್ದಾರೆ



ಚಿತ್ರದುರ್ಗದ ಜಗದ್ಗುರುಗಳು ಶ್ರೀ ಶಿವಲಿಂಗಪ್ಪನವರಿಗೆ "ಸದಾಚಾರಪ್ರದೀಪಕ" ಎಂಬ ಶುಭಾಶೀರ್ವಾದಪ್ರಶಸ್ತಿಯನ್ನು ದಯಪಾಲಿಸಿದ ಸನ್ನಿವೇಶ




೧೯೫೬ ರಲ್ಲಿ ಕರ್ನಾಟಕಪ್ರಾಂತನಿರ್ಮಾಣದ ಉತ್ಸವವನ್ನು
ಶ್ರೀ. ಶಿವಲಿಂಗಪ್ಪನವರು ಮತ್ತು ಅವರ ಸಹಕಾರಿಗಳು ಆಚರಿಸಿದಾಗ
ಪ್ರದರ್ಶಿಸಿದ ಒಂದು ಚಿತ್ರ



ಶ್ರೀ. ಅನ್ನಪೂರ್ಣಾದೇವಿಯ ಮುಖಬಿಂಬಪ್ರತಿಷ್ಠೆ ಪೂಜಾಭಿಷೇಕ ಹೋಮಹವನಗಳ
ಧಾರ್ಮಿಕ ಸಂದರ್ಭದ ಸನ್ನಿವೇಶ



ಶ್ರೀ ವಿಠ್ಠಲ-ರಖುಮಾಯಿ
ಶ್ರೀ. ಶಿವಲಿಂಗಪ್ಪನವರು ಮಾಡಿಸಿದ ಬೆಳ್ಳಿಯ ಪ್ರತಿಮಾ ಸಂಪುಟ



ಶ್ರೀ ಕ್ಷೇತ್ರ ಕಾಶಿಯಲ್ಲಿ ಜಂಗಮವಾಡಿ ಮಠದಲ್ಲಿ ಶ್ರೀ. ಶಿವಲಿಂಗಪ್ಪನವರು ಮಾಡಿದ
ಕೋಟಿ ಜಪದ ಮಂಗಳ ಸಮಾರಂಭದ ಪೂಜೆಯ ಸನ್ನಿವೇಶ



ಶ್ರೀಮನ್ನಿಡುಮಾಮಿಡಿ ಶ್ರೀಶೈಲಸೂರ್ಯಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ. ಶ್ರೀ. ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು

## ಗುರುಗಳಡಿದಾವರೆಯಲ್ಲಿ

ಜಗದಾದಿ ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ |
ಜಗದ ಜೀವಿಗಳನುದ್ಧರಿಪ ಶ್ರೀ ಚೆನ್ನಬಸವರಾಜ ಯೋಗೀಶ್ವರ ॥ ॥ ಪಲ್ಲ ॥

ನಿಡುಮಾಮಿಡಿ ಶ್ರೀಗಳ ದರುಶನಕೆ ಆತುರದಿಂ ಎದೆ ಮಿಡಿಯೆ |
ಕಡುಪ್ರೀತಿಯಿಂ ಮಾತೆ ಪಾರ್ವತಿಯು ಕರುಣೆಯಿಂ ಕರೆದೊಯ್ಯೆ ॥

ಬಡಭಕ್ತನಂ ಗುರು ಕಡುವಾತ್ಸಲ್ಯದಲಿ ಆದರಿಸಿದೊಡನೆಯೆ |
ದೃಢಮಾರ್ಗ ತೋರಿದಾ ಬೋಧೆಯನು ಆವಗಂ ಮರೆಯೆ ॥ ೧ ॥

ಗುರು ಧ್ಯಾನದಾ ಸುಫಲ ಮೈನಿಮಿರುತಿಹುದು ಈ ಶುಭೋತ್ಸವದಲಿ |
ಗುರುವಿನ ಅಡಿಯು ಧ್ಯಾನ ಕನ್ನಡಿಯಂತೆ ಪ್ರತಿಬಿಂಬಿಸುತ ಹೃತ್ಕಮಲದಲಿ ॥
ತರಳ ಭಕ್ತರನು ಘನ ದಿವ್ಯ ಪೀಠದಾ ದಿವ್ಯ ಮಹಿಮೆಯಲಿ |
ವರ ಸತ್ಯ ಸತ್ಕೃಪೆ ಬೆರೆತು ಬೆಳಗಿಹುದು ಶಿವಭಕ್ತಿ ಭಾವದಲಿ ॥ ೨ ॥

ಸತ್ಯ ಸದ್ಧರ್ಮ ಸದ್ಭಾವ ಸದ್ವಿದ್ಯಾ ಸಕಲ ಸನ್ಮಾರ್ಗದಲಿ ಸೇರಿ |
ಅತ್ಯಮೌಲ್ಯ ದೈವಕೃಪೆ ಗುರುವಾತ್ಸಲ್ಯರೂಪದೊಳು ಮೈದೋರಿ ॥
ನಿತ್ಯ ಮಂದ ಮನುಜರ ತಿದ್ದಿ ಶುದ್ಧಗೊಳಿಸಿದುದೀಪರಿ |
ಮಿಥ್ಯಭಗ್ನ ಹೃದಯಕೆ ಭರವಸೆಯ ನೀಡಿದುದೆ ಈ ಗುರಿ ॥ ೩ ॥

ಗುರು ಕರುಣೆಗೆ ಇಲ್ಲ ಇಹಪರ ಸಕಲಕೆ ರಕ್ಷಣಕಾರಿ |
ಗುರು ಆದರ್ಶನಕೆ ಕೈ ನೀರೆರದ ಜಗದ್ಗುರು ಚೆನ್ನಬಸವರಾಜ ಭವಾರಿ ॥
ಶಿರಬಾಗಿ "ಶಿವಲಿಂಗಸಂಗತರಂಗ"ಗಳನರ್ಪಿಸುತಿರೆ
ಹರುಷದಿಂ ಕೈ ಮುಗಿವೆ ನಿಮ್ಮಡಿಗಳಿಗೆ ಮಣಿಯುವೆ, ಪೊರೆ | ॥ ೪ ॥

ತಮ್ಮ ಅಡಿದಾವರೆಯ ಆರಡಿ
—'ಆತ್ಮ'



ಭಕ್ತಿಸಂಗಿಯಾಗಿ
ಶ್ರೀ ಶಿವಲಿಂಗಸಂಗವನ್ನು
ಅನುಭವಿಸುತಿರೆ ಹೃದಯದಿಂದ
ಹೊರಹೊಮ್ಮಿದ ಭಾವತರಂಗಗಳ
"ಶ್ರೀಶಿವಲಿಂಗಸಂಗತರಂಗ"
ಮಾಲೆಯನ್ನು
ನಿಡುಮಾಮಿಡಿ ಮಹಾಸ್ವಾಮಿಗಳ
ಅಡಿಯಲಿ ಅರ್ಪಿಸುತಿಹ
ಶ್ರೀ ಶಿವಲಿಂಗಪ್ಪ
ಹೆರಲಗಿಯವರು



ಶ್ರೀಮನ್ನಿಡುಮಾಮಿಡಿ ಶ್ರೀಶೈಲಸೂರ್ಯಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ. ಶ್ರೀ. ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳ ಶುಭಾಶೀರ್ವಾದ.

# ನೆಚ್ಚುಗೆಯ ನಲ್ವರಕೆ

ಕನ್ನಡ ನಾಡಿನ ಹೆಸರಾಂತ ಹರದರೂ ಕೃಷಿಕರೂ ಕಲಾಭಿಮಾನಿಗಳೂ ಕವಿಗಳೂ "ಧರ್ಮಧುರೀಣ" ಬಿರುದಾಂಕಿತರೂ ಆದ ವಿಜಾಪುರದ ಶ್ರೀಮಂತ ಶಿವಲಿಂಗಪ್ಪ ಸಂಗನಬಸಪ್ಪ ಹೆರಲಗಿ ಅವರು ಆಗಾಗ ತಮ್ಮ ಬಾಳು-ಬದುಕಿನಲ್ಲಿ ಒದಗಿದ ಭಾವಸ್ಫೂರ್ತಿಯಿಂದ, ಬಾಳಿನ ಅನುಭವದಿಂದ, ಪರಾರ್ಥಬುದ್ಧಿಯಿಂದ, ಪರಮಾರ್ಥಪ್ರೇರಣೆಯಿಂದ ಬರೆದಿಟ್ಟ ಬಿಡಿ ಹಾಡುಗಳನ್ನು ಶ್ರೀ ಪದ್ಮರಾಜ ಹುನಗುಂದ ಅವರು ಅತ್ಯಂತ ಅಕ್ಕರೆಯಿಂದ ಆಯ್ದು ನಲ್ವೆಸರುಗಳನ್ನು ನೆಯ್ದು

ಅಯ್ದು ಹಸುಗೆಯಾಗಿಸಿ "ಶ್ರೀ ಶಿವಲಿಂಗಸಂಗತರಂಗ" ಎಂಬ ಮುದ್ದಾದ ಹೆಸ-ರಿಟ್ಟು ಪ್ರಕಟಿಸುತ್ತಿರುವುದನ್ನು ತಿಳಿದು ಹೃದಯ ತುಂಬಿಬಂದಿದೆ.

" ಶ್ರೀ ಶಿವಲಿಂಗ ಸಂಗ ತರಂಗ " ಅಯ್ವತ್ತುನಾಲ್ಕು ತೆರೆಗಳಿಂದ ಕೂಡಿದೆ. ಸಾಗರದ ತರಂಗ ಸಹಸ್ರಾರವಿದ್ದರೂ ಅವೆಲ್ಲಕ್ಕೂ ಒಂದೇ ನಾಮ, ಒಂದೇ ರೂಪು, ಒಂದೇ ಕ್ರಿಯೆ. ಆದರೆ ಈ "ಶ್ರೀ ಶಿವಲಿಂಗ ಸಂಗ"ದ ತರಂಗಗಳು ಸಂಖ್ಯೆಯಲ್ಲಿ ಸೀಮಿತವಾಗಿದ್ದರೂ ನಾಮ ರೂಪು ಕ್ರಿಯೆಗಳಲ್ಲಿ ಸೀಮಿತವಾಗಿಲ್ಲ. ಒಂದೊಂದು ತೆರೆಗೂ ಒಂದೊಂದು ಹೆಸರು, ಒಂದೊಂದು ಚೆಲುವು; ಒಂದೊಂದು ಬಗೆಯ ಕ್ರಿಯೆಗಳಿಂದ ಕಳೆಗೂಡಿವೆ. ಸಾಗರದ ತೆರೆಗಳಂತೆ ಇವು ಜಡವಾಗಿಲ್ಲ; ಜೀವಂತ ವಾಗಿವೆ, ಜ್ವಲಂತವಾಗಿವೆ. ಕಡಲ ತೆರೆಗಳಿಗಿಂತಲೂ ಬೆಡಗುಳ್ಳವಾಗಿವೆ; ಬಿನ್ನಾಣ ವುಳ್ಳವಾಗಿವೆ, ರಸಯೋಗವುಳ್ಳವಾಗಿವೆ, ಭಾವಾನುಭವಸಾರ ಸಂಪತ್ತುಳ್ಳವಾಗಿವೆ.

ಇವು ಭಕ್ತನ ಭಾವಸಾಗರದ ತರಂಗಗಳು. ಆದ್ದರಿಂದ ಭಾವಸಂಪತ್ತು ಭಾವಸಂವಿತ್ತು ಇವುಗಳಲ್ಲಿ ತುಂಬಿಬಂದಿದೆ. ಜತೆಗೆ ಭಾವಸೌಂದರ್ಯವೂ ಬೆರೆದು ಬಂದಿದೆ. ಭಾವಮಾಧುರ್ಯವೂ ತುಂಬಿನಿಂದಿದೆ. ಒಟ್ಟಿನಲ್ಲಿ ಭಾಷಾಶೈಲಿಯಲ್ಲಿ ಭಾವಶೀಲ ಧರ್ಮಗಳು ಬೆಸುಗೆಯಾಗಿವೆ. ನಮ್ಮೀ ಮಾತಿನ ಮನದಟ್ಟಿಗಾಗಿ ಯಾವ ಯಾವ ಕವನಗಳನ್ನು ಉದ್ಧರಿಸೋಣ. ಹೆಚ್ಚು ಕವನಗಳು ಭಾವಪೂರ್ಣ ವಾಗಿ ಬಂದಿರುವಾಗ ! ಆದರೂ ಕೆಲವನ್ನಿಲ್ಲಿ ಕಾಣಿಸುತ್ತೇವೆ.

ಮೊತ್ತ ಮೊದಲಿನ ಕವನದಲ್ಲಿ ಕವಿ ಒಡೆಯ ಶಂಕರಲಿಂಗನನ್ನು ತನ್ನ ಒಡಲ ಒಲವಿನ ಕಂದನನ್ನಾಗಿಸಿ ಭಕ್ತಿಭಾವದ ಲಾಲಿಯಿಂದ ಜೋಗುಳವಾಡಿ ಜಾಗತಿಕ ಜೀವಿಗಳ ಕಲ್ಯಾಣವನ್ನು ಕೋರಿದ್ದಾನೆ. ಸಕಲರ ಸೌಖ್ಯವನ್ನು, ಸಕಲರ ಐಕ್ಯವನ್ನು.

ಸ್ವಜನರನ್ನು ಎಚ್ಚರಿಸಿ ಉಪ್ಪವಡಿಸುವ "ಸಾಕಿನ್ನು ಎದ್ದೇಳ" ಎಂಬ ಕವನ ಕವಿಯ ಸ್ಫೂರ್ತಿಯನ್ನು ಸಾಮಾಜಿಕರ ಪ್ರೀತಿಯನ್ನು ಸಾಟುವ ಸುಂದರ ಭಾವ ಗೀತ ! ಪ್ರಕೃತಿಯಲ್ಲಿ ಪ್ರಗತಿಯನ್ನು ಸಾಧಿಸುವ ಸತ್ಯವನ್ನು ಸಂಪಾದಿಸುವ ಸಂತೋಷದಲ್ಲಿ ನಲಿವ ಜೀವನ ಸಂದೇಶವನ್ನು ಸಾರುವ ಈ ನುಡಿಯನ್ನು ನೋಡಿ :

"ಪ್ರಕೃತಿ ರಂಗದಿ ಬಾಳಿ ಸಂಪತ್ತು ಗಳಿಸೋಣ;
ಪ್ರಾಕೃತಿಕ ಭಾವದೊಳು ಸತ್ಯವನು ಕಾಣೋಣ !
ಪ್ರಕೃತಿ ದೇವಿಯನೀಗ ಭಕ್ತಿಯಿಂ ಪೂಜಿಸುತೆ,
ಸಚ್ಚಿದಾನಂದವ ಪಡೆದು ಹರುಷದಿಂ ನಲಿಯೋಣ !

ಜಗರಂಗವನ್ನು ಬಿಟ್ಟು ಶಿವಲಿಂಗಸಂಗವನ್ನು ಬಯಸಿಲ್ಲ ಕವಿ. ಪ್ರಪಂಚ ಪರಮಾರ್ಥವೆರಡನ್ನು ಮಾಣದೆ ಕೂಡಿ ನಡಿಸುವ ಜಾಣತನ ಕವಿಗಿದೆ.

ಸಕಲರನ್ನು ಉದ್ಧರಿಸುವ ಶಂಕರಲಿಂಗನೊಡನೆ ಆಟವಾಡಲು-ಆಟ ಆಡಿ ಶಕ್ತಿಗಳಿಸಲು ಗಳಿಸಿ ಜಗದ ಜಂಜಾಟ ನೀಗಲು ಎಲ್ಲರನ್ನು ಎಚ್ಚರಿಸಿ ಎದ್ದೇಳಿಸುವ ಈ ಕಾವ್ಯವಾಣಿ ಶ್ರಾವ್ಯವಾಗಿದೆ; ನವ್ಯವಾಗಿದೆ. ಎಲ್ಲರನ್ನು ತಮಸ್ಸಿನಿಂದ ತೇಜಸ್ಸಿನೆಡೆಗೆ ಕರೆದೊಯ್ಯುತ್ತಿದೆ.

'ಇದರೊಳೆಲ್ಲ ಅರಿವಿನ ಗುಟ್ಟಿದೆ' ಎಂಬ ಕವನದಲ್ಲಿ ಜೀವನಾನುಭವವನ್ನು ಕವಿ ಕಾವ್ಯಮಯಶೈಲಿಯಲ್ಲಿ ಸುಂದರವಾಗಿ ಎರಕಹೊಯ್ದಿದ್ದಾನೆ. ಚೆಲುವ ಚಿತ್ರವನ್ನು ರೂಪಿಸಿ ಶಬ್ದಶಿಲ್ಪಿಯೆನಿಸಿದ್ದಾನೆ. ಈ ಕವನವನ್ನು ಓದುಗರು ಓದಿಯೇ ಆನಂದಿಸಬೇಕು; ಅನುಭವಿಸಬೇಕು.

'ಸುಜನರಿಗಾಗಿ' ಎಂಬ ಎರಡನೆಯ ಪ್ರಕರಣದಲ್ಲಿನ 'ಸ್ನೇಹದ ಸಮರಸತೆ' ಎಂಬ ಸ್ನೇಹಗೀತ ಗಮನಾರ್ಹವಾದುದು. ಇದರಲ್ಲಿ ಕವಿ ತಂತಿಯಿಲ್ಲದ ಹೃದಯ ವೀಣೆಯ ಮಿಡಿದು ಹೃದಯಂಗಮವಾದ ಹೃನ್ನಾದ ಕೇಳಿಸಿದ್ದಾನೆ. ಕರುಳ ಕಿವಿಯ ತೆರೆಯಿಸಿದ್ದಾನೆ. ಪ್ರೇಮಗಾನದಲ್ಲಿ ಜನಮನವ ರಮಿಸಿದ್ದಾನೆ.

'ತೂಗಿರೆ ಭದ್ರನ ತೂಗಿರೆ ರುದ್ರನ' ಇದೊಂದು ಶಿಶುಗೀತೆ! ಈ ಗೀತೆಯಲ್ಲಿ ಶಿಶುವನ್ನೇ ಶಿವನನ್ನಾಗಿ ಕಂಡ ಕವಿಯ ಆರ್ಷದೃಷ್ಟಿಯನ್ನು ಕಾಣಬೇಕು.

"ಶಿವನ ಪ್ರೇರಣೆ ಮೊದಲು ಗುರುಕರುಣೆಯಾ ಮೇಲೆ ।
......ಅದರಿಂದಲೇ ಮುಕ್ತಿಕ್ರಮವು ತಿಳಿಯೆ......।। "

ಎಂಬೀ ಪದ್ಯಪಲ್ಲವಿಯಲ್ಲಿ ಮಕ್ಕಳ ಹೆಸರುಗಳನ್ನೇ ಮುಕ್ತಿಯನ್ನು ಪಡೆವ ಸೋಪಾನಗಳನ್ನಾಗಿ ಮಾಡಿದ ದಾರ್ಶನಿಕ ದೃಷ್ಟಿಯನ್ನು ದಿಟ್ಟಿಸಬೇಕು. ಶಿಶುಗೀತೆಯನ್ನು ಶಿವಗೀತೆಯನ್ನಾಗಿಸಿದ ಭಾವಶುದ್ಧಿಯನ್ನು ಭಾವಿಸಬೇಕು.

ಈ ದಿಸೆಯಲ್ಲಿ ತಮ್ಮ ಮಗನನ್ನು ಹರಸಿ ಬರೆದ 'ಈ ಹಾರ ಶಿವಣ್ಣನ ಕೊರಳಲಿ ಚೆಲುವ ಚೆಲುವಾಗುತಿರಲಿ' ಎಂಬ ರಚನೆ ವಾಚನಾರ್ಹವಾಗಿದೆ.

'ನನ್ನವರಿಗಾಗಿ' ಎಂಬ ಪ್ರಕರಣದ ೧೦–೧೧ ಸಂಖ್ಯೆಯ ಎರಡು ಕವನಗಳನ್ನು ಕವಿಯ ವ್ಯವಹಾರೋದ್ಯಮಗಳ ಕೌಶಲ್ಯಗಳನ್ನು ಕಂಡರಿಯಬೇಕೆಂದಿದ್ದರೆ ತಪ್ಪದೆ ಓದಬೇಕು.

'ಪ್ರೇರಣೆಗೆ' ಎಂಬ ಪ್ರಥಮ ಕವನ ವಿಷಯದಲ್ಲಿ 'ಈ ಕವನದಲ್ಲಿ ಸೂಕ್ಷ್ಮವಾಗಿ ಅವ್ಯಕ್ತವಾಗಿ ಶ್ರೀ ಶಿವಲಿಂಗಪ್ಪನವರು ಕವಿತ್ವ ಶಕ್ತಿಯ ಪ್ರೇರಣೆಯನ್ನೂ ಆಹ್ವಾನಿಸಿರುವರೋ ಏನೊ?' ಎಂಬೀ ಪದ್ಮರಾಜ ಹುನಗುಂದ ಅವರ ಅಡಿಟಿಪ್ಪಣಿಯ ಊಹೆಯನ್ನು ಊರ್ಜಿತಗೊಳಿಸುವಂತಿದೆ.

'ದಾರಿ ತೋರಲು ಮಾತ್ರ ನೀನೆ ಬೇಕು' ಎಂಬ ಕವನ ಜೀವನದರ್ಶನದಂತಿದೆ. ಕಮನೀಯ ಕವನವಾಗಿದೆ. ಉತ್ತಮ ಕವನಗಳಲ್ಲಿ ಇದಕ್ಕೆ ಉನ್ನತ

ಸ್ಥಾನವಿದೆ. ಕವಿಯ ಕೌಶಲ್ಯ ಕಾಣಿಸಲು ಈ ಕವನವೇ ಬೇಕು.

'ಅಂತರಾತ್ಮನಿಗಾಗಿ' ಎಂಬ ಪ್ರಕರಣಕ್ಕೆ ಆಯ್ದ ೨-೩-೫-೬-೮-೧೧ ಇವಾರು ಅಂತರ್ದೃಷ್ಟಿಯನ್ನು ಹುಟ್ಟಿಸುವ ಅತ್ಯುತ್ತಮ ಕವನಗಳು. ವಾಚಕರು ಇವುಗಳ ರುಚಿಯನ್ನು ಓದಿ ಆಮೋದಿಸಬೇಕು; ಅನುಮೋದಿಸಬೇಕು.

ಕೊನೆಯದಾಗಿ 'ಪರಮಾತ್ಮನಿಗಾಗಿ' ಎಂಬ ಪ್ರಕರ್ಣದಲ್ಲಿ ಪ್ರಕಾಶಗೊಂಡ, ಪ್ರಕರ್ಣಕ್ಕೂ ಪ್ರಕಾಶಕ್ಕೂ ಕೊನೆಯದಾದ 'ನಮೋ ಮರಣ ಮಾರಣಾ' ಮರೆಯಬಾರದ ಕವನ- ಕವಿ ನುಡಿಯ ಋಣವನ್ನು ಮರೆಯೆನೆನ್ನುವಂತೆ ನುಡಿಗಾರರು ಕವಿಯ ಋಣವನ್ನು ಮರೆಯದಂತಿದೆ ಈ ಕವನ. ನುಡಿನುಡಿಯಲ್ಲಿಯೂ ಅನುಭವಜ್ಯೋತಿ ಬೆಳಗಿದೆ; ಭಾವರಸಾಮೃತದ ಮಾಧುರ್ಯ ತುಂಬಿದೆ. ಕಾವ್ಯಶೈಲಿಯ ಸೌಂದರ್ಯ ಹೊಮ್ಮಿದೆ. ಸಂಪಾದಕರು ಹೇಳುವಂತೆ ಇದು ದಿಟಕ್ಕೂ ಚರಮ ಗೀತೆ. ಭಾವ-ಭಾಷೆಗಳೆರಡರ ಮಧುರ ಮೇಳನ ಇಲ್ಲಿದೆ.

ಇಂತಹ ಉತ್ತಮವಾದ 'ಶಿವಲಿಂಗಸಂಗತರಂಗ' ಎಂಬ ಕವನ ಸಂಕಲನ ಕೃತಿಯನ್ನು ಸಂಪಾದಿಸಿದ ಶ್ರೀ ಪದ್ಮರಾಜ ಹುನಗುಂದ ಅವರ ಶ್ರಮ ಸಾರ್ಥಕವಾಗಿದೆ. ಕವನರೂಪತರಂಗ ತರಂಗಕ್ಕೂ ಇವರು ಕೊಟ್ಟ ಮುಡಿ (ತಲೆ) ಕಟ್ಟು ಮತ್ತು ಅಡಿ ಟಿಪ್ಪಣಿಗಳಲ್ಲಿ ಇವರ ಜಾಣ್ಮೆಯನ್ನು ಕಾಣಬಹುದಾಗಿದೆ. ತರಂಗ ತರಂಗದ ಅಂತರಂಗವನ್ನು ಅರೆಕೊರೆಯಿಲ್ಲದಂತೆ ಅರಿತಿದ್ದಾರೆ. ಅರಿತಿದ್ದನ್ನು ಅಚ್ಚುಮೆಚ್ಚಾಗಿ ಬರೆದು ರೂಪಿಸಿದ್ದಾರೆ. ಕವನಗಳ ಭಾವವನ್ನರಿಯಲು ಓದುಗರಿಗೆ ಇವರ ಅಡಿ ಟಿಪ್ಪಣಿಯು ಸಹಾಯಕವಾಗಿದೆ. ಸಂಪಾದಕರು ತಮ್ಮ ನಿವೇದನೆಯಲ್ಲಿ ಕವಿಗೂ ತಮಗೂ ಇರುವ ಸಂಬಂಧವನ್ನು ಮತ್ತು ಕವಿಯ ವ್ಯಕ್ತಿವೈಶಿಷ್ಟ್ಯವನ್ನು ಚೆನ್ನಾಗಿ ವ್ಯಕ್ತಗೊಳಿಸಿದ್ದಾರೆ. ಮತ್ತು ತಾವು ಗ್ರಂಥದಲ್ಲಿ ಮಾಡಿದ ಆಯ್ದು ವಿಭಾಗಗಳ ಔಚಿತ್ಯವನ್ನು ಭಾವವೈಶಾಲ್ಯವನ್ನು ಬಿಚ್ಚಿ ತೋರಿಸಿದ್ದಾರೆ.

ಕವಿ ಶಿವಲಿಂಗದ ಕರುಣಾಂಬುಧಿ ತರಂಗಗಳನ್ನು ತನ್ನ ಕವನಗಳಲ್ಲಿ ರೂಪಿಸಿದ್ದರೆ ಸಂಪಾದಕರು ಕವಿ ಕವನಗಳಲ್ಲಿರುವ ಭಾವತರಂಗಗಳನ್ನು ತಮ್ಮ ಅಡಿ-ಟಿಪ್ಪಣಿಗಳಲ್ಲಿ ಅಂದವಾಗಿ ಅಳವಡಿಸಿದ್ದಾರೆ. ಉಭಯರು ಇದನ್ನು ಕನ್ನಡ ನುಡಿ-ಗಡಲಲ್ಲಿ ನಿಡುಗಾಲ ರಾಜಿಸುವ ರಸಪೂರ್ಣತರಂಗವನ್ನಾಗಿಸಿದ್ದಾರೆ. ಇವರುಗಳಿಂದ ಇನ್ನೂ ಉತ್ತಮವಾದ ತರಂಗಗಳು ಏಳಲೆಂದು, ಎದ್ದು ಎಲ್ಲ ಓದುಗರ ಎದೆತೀರಗಳನ್ನು ತಂಪುಗೊಳಿಸಲೆಂದು ಹಾರೈಸೋಣವಾಗಿದೆ. ಆ ನುಡಿತೆರೆಗಳಲ್ಲಿ ಶ್ರೀ ಶಿವಲಿಂಗಪ್ಪನವರು ಸದಾ ಶೋಭಿಸಲೆಂದು ಹೃದಯಾರೆ ಹರಸೋಣವಾಗಿದೆ.

**ಕವಿಭಾವತರಂಗದಲ್ಲಿ ವಿಹರಿಸಿದ ಪದ್ಮರಾಜ ಹಂಸಧ್ವನಿಯು**
**ಅನಂತ ಮನ್ವಂತರ ಮೊರೆಯುತ್ತಿರಲಿ.**

---

ಭಕ್ತಿಸಂಗಿಯಾಗಿ ಶ್ರೀ ಶಿವಲಿಂಗಸಂಗವನ್ನು ಅನುಭವಿಸುತಿರೆ ಹೃದಯದಿಂದ
ಹೊರಹೊಮ್ಮಿದ ಭಾವತರಂಗಗಳ " ಶ್ರೀ ಶಿವಲಿಂಗಸಂಗತರಂಗ " ಗಳ
ಸುಮನಗಳನ್ನು ಕನ್ನಡಿಗರ ಅಡಿಯಲ್ಲಿ ಅರ್ಪಿಸುತಿಹ



ಶ್ರೀ ಶಿವಲಿಂಗಪ್ಪ ಸಂಗನಬಸಪ್ಪ ಹೆರಲಗಿಯವರು

# ಶ್ರೀಶಿವಲಿಂಗಸಂಗತರಂಗ

## ೧

### ಸ್ವಜನರಿಗಾಗಿ—೧

**ಜೋ ಜೋ ಜೋ ಜಡೆಯ ಶಂಕರಲಿಂಗಾ ಜೋ ಜೋ**



ಶ್ರೀ. ಶಂಕರಲಿಂಗ ದೇವರ ತೇರು

ಜೋ ಜೋ ಜೋ ಜಡೆಯ ಶಂಕರಲಿಂಗಾ
ಜೋಜೋ ॥ ಪಲ್ಲ ॥

ಗಜಮುಖ ಗಣಪತಿ ಗೌರಿಯ ನಂದಾ।
ಸರ್ಪಭೂಷಣನಿಗೆ ಶಿಶುವಾಗಿ ಬಂದಾ ॥
ನಾಗಲಿಕರಕ್ಷಕ ಚಿದಾನಂದಾ।
ನಾಗಲಿಕಸೌಖ್ಯದ ಸದಾನಂದಾ
ಜೋ ಜೋ ॥ ೧ ॥

ನವಲಿ ಶಂಕರಲಿಂಗ ವರವ ಪಡೆದವರು।
ಶಂಕರ ದಾಸಿಮಯ್ಯ ಮಹಿಮೆ
ತೋರಿದರು ॥
ನಾವೆಲ್ಲರೆಂದಿಗೂ ಅವರ ವಂಶಜರು
ಕಿಂಕರರನು ಸಲೆ ಸಲಹುತಲಿಹರು
ಜೋ ಜೋ ॥ ೨ ॥

ಜೋರಾಪುರ ಪೇಟೆಯು ಇದು ನಮ್ಮ ಸ್ಥಾನ।
ಹೊಂದಿಕೊಂಡಿಹುದಲ್ಲಿ ನಮ್ಮ ಜನ॥
ಜಡೆಯ ಶಂಕರಲಿಂಗ ಬ್ಯಾಂಕು ಸ್ಥಾಪನಾ।
ಚೆಂದಾಗಿ ನಡೆಸಿಹರಯ್ಯಾ ಸಂಘದ ಜನಾ ಜೋ ಜೋ ॥ ೩ ॥

ವೈಶಾಖ ಶುದ್ಧದಿ ಷಷ್ಠಿಯ ಸುದಿನ।
ಶಂಕರಲಿಂಗ ತೇರನೇರಿದ ದಿನ ॥
ವೃಷಭ ಹೊಡಿಹರಯ್ಯಾ ಭಕ್ತೀಲಿ ಶತಮಾನ
ಸಕಲರು ಸ್ಮರಿಸುವರು ಆ ಪರಮಾತ್ಮನ ಜೋ ಜೋ ॥ ೪ ॥

ಐಕ್ಯದಿಂದೆಲ್ಲರು ಎಳ್ಗೆಯ ಹೊಂದಲಿ |
ಭಕ್ತಿಯಿಂದೆಲ್ಲರು ಮುಕ್ತಿಯ ಪಡೆಯಲಿ ||
ಅರಿವ ಹೊಂದ್ಯೆಲ್ಲರು ಕುರುಹನು ಕಾಣಲಿ |
ಜೀವಿಗಳೆಲ್ಲರು ಶಿವನೊಳು ಬೆರೆಯಲಿ ಜೋ ಜೋ || ೫ ||

———

[ಭಗವಂತನಿಗಾಗಿ ಹಂಬಲಿಸುವ ಭಕ್ತನ ಭಕ್ತಿ ಚತುರ್ವಿಧವಾಗಿ ಹೊರಹೊಮ್ಮುತ್ತದೆ; ದಾಸ್ಯ, ಸಖ್ಯ, ವಾತ್ಸಲ್ಯ ಮತ್ತು ಮಾಧುರ್ಯ. ದಾಸ್ಯಭಕ್ತಿಯಲ್ಲಿ ಭಕ್ತ ಭಗವಂತನ ದಾಸನಾಗಿ "ಪ್ರಭೋ" ಎಂದು ಬೇಡಿಕೊಳ್ಳುತ್ತಾನೆ. ಸಖ್ಯದಲ್ಲಿ ಮಿತ್ರನಾಗಿ "ಸಖಾ" ಎಂದು ಮೊರೆಯಿಡುತ್ತಾನೆ. ವಾತ್ಸಲ್ಯದಲ್ಲಿ "ತಂದೆ! ಕಂದಾ!" ಎಂದು ಅಕ್ಕರತೆಯಿಂದ ಆರ್ತತೆಯಿಂದ ಕೂಗಿಕೊಳ್ಳುತ್ತಾನೆ. ಮಾಧುರ್ಯದಲ್ಲಿ "ನಲ್ಲ! ನಲ್ಲೆ!" ಎಂಬ ಸತಿಪತಿ ಭಾವದ ಹಂಬಲ ಮತ್ತು ಸೊಗಸು ಉಮ್ಮಳಿಸುತ್ತದೆ.

"ಜೋ ಜೋ ಜೋ ಜಡೆಯ ಶಂಕರಲಿಂಗಾ ಜೋ ಜೋ" ಎಂಬ ಕವನವು ವಾತ್ಸಲ್ಯ ಭಕ್ತಿಯ ನಿದರ್ಶನ. ಅಕ್ಕರೆಯ ಅಮ್ಮ ಕಕ್ಕುಲತೆಯಿಂದ ಕಂದನನ್ನು ತೊಟ್ಟಿಲಲ್ಲಿರಿಸಿ ಅನುರಾಗದ ರಾಗದಲ್ಲಿ ಲಲ್ಲೆಗೈಯುತ್ತ ಹಾಡಿದ ಲಾಲಿಯ ಸೊಗಸು ಈ ಕವನದಲ್ಲಿದೆ. ಆದರೆ ತಾಯಿ ಕಂದನ ಶಾಂತಿಗಾಗಿ, ಸೊಗಸಿಗಾಗಿ ಹಿತಕ್ಕಾಗಿ ಲಾಲಿಯನ್ನು ಹಾಡುವವಳಾದರೆ, ಈ ಜೋಗುಳದಲ್ಲಿ ಸ್ವಜನರಾದ ಶಂಕರದಾಸಿಮಯ್ಯನ ವಂಶಜರಾದ ನಾಗಲಿಕರೊಡನೆ ಸೇರಿ ಸಾಮೂಹಿಕವಾಗಿ ಜಟಾಶಂಕರಲಿಂಗನೆಂಬ ಕಂದನನ್ನು ತಮ್ಮ ಪಂಚಪ್ರಾಣಗಳ ತೊಟ್ಟಿಲಲ್ಲಿರಿಸಿ, ಜೋಗುಳವಾಡಿ, ಆವನ ಕರುಣೆಯಿಂದ "ಐಕ್ಯದಿಂದೆಲ್ಲರೂ ಏಳ್ಗೆಯ ಹೊಂದಲಿ" ಎಂದು ತಮ್ಮ ಸಮಾಜದ ಐಹಿಕ ಉದ್ಧಾರವನ್ನು ಮತ್ತು "ಭಕ್ತಿಯಿಂದೆಲ್ಲರು ಮುಕ್ತಿಯ ಪಡೆಯಲಿ" ಎಂದು ಆಧ್ಯಾತ್ಮಿಕ ಉದ್ಧಾರವನ್ನು ಕೋರಿ, ಕೊನೆಗೆ "ಜೀವಿಗಳೆಲ್ಲರೂ ಶಿವನೊಳು ಬೆರೆಯಲಿ" ಎಂದು ಕವನಕಾರರು ಅಖಿಲಮಾನವ ಕುಲಕೋಟಿಯ ಕಲ್ಯಾಣಕ್ಕಾಗಿ ಕೂಗಿಕೊಂಡಿರುವರು]

———

## ಸ್ವಜನರಿಗಾಗಿ—೨

### ಉತ್ತಿಷ್ಠತ ! ಜಾಗ್ರತ ! ಪ್ರಾಪ್ಯವರಾನ್ನಿಬೋಧತ !

ಸಾಕಿನ್ನು ಎದ್ದೇಳಿ ಮೋಹನಿದ್ರೆಯ ಬಿಟ್ಟು |
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು ||

ಮನದೊಳಗೆ ತುಂಬಿರುವ ಕಾಮದಾಶೆಯ ಸುಟ್ಟು |
ತನುವಿನೊಳು ಹೊಕ್ಕಿರುವ ಭ್ರಾಂತಿಯನು ಮೆಟ್ಟಿ || ೧ ||

ಭಾಸ್ಕರನು ಬಂದಿಹನು ಬೆಳಕನ್ನು ತಂದಿಹನು |
ಮೊಗ್ಗೆಗಳು ಕರೆಯುವವು ತಮ್ಮೊಡನೆ ಅರಳಲ್ಕೆ ||
ಎಲರು ತಾ ಬೀಸುತ್ತ ಸುರಭಿಯನು ಕೊಡುತಿಹುದು |
ಪಕ್ಷಿಗಳು ಹಾಡುವವು ಕಣ್ದೆರೆದು ಸಂತಸದಿ || ೨ ||

ಕಿರಣಗಳು ಹಬ್ಬುವವು ಮಬ್ಬನ್ನು ದೂಡುತ್ತ |
ನಾವಿನ್ನು ಮಬ್ಬಿನೊಳು ಮಲಗುವದು ತರವಲ್ಲ ||
ಗುರುದೇವ ಕೊಟ್ಟಿಹನು ನಮಗೆಲ್ಲ ಬುದ್ಧಿಯನು |
ಹಚ್ಚಿಹನು ಸನ್ಮಾರ್ಗ ಹಿಂಜರಿವುದೊಳಿತಲ್ಲ || ೩ ||

ತೆರೆಯಿರೈ ಒಳಗಣ್ಣ ಹರಿಯಿರೈ ಹಗ್ಗವನು |
ಮುರಿಯಿರೈ ಮದವನ್ನು ತೊರೆಯಿರೈ ಶೋಕವನು ||
ಅರಿಯಿರೈ ಮುಂದಿನಾ ಹಿರಿಗುರಿಯು ದಾರಿಯನು |
ಸ್ಮರಿಸಿರೈ ದೇವನಂ ಮನದಿ ನಿಷ್ಕಾಮದಲಿ || ೪ ||

ಜರೆಯೋಣ ಜವದಿಂದ ಸಂಸಾರ ಜಂಜಾಟ |
ರನ್ನವನು ಹುಡುಕುವದ ಬಿಟ್ಟೇಕೆ ಅಲೆದಾಟ ||
ಮನಸಿನಾ ಶಾಂತಿಯನು ಕಳೆದೇಕೆ ಹೊರನೋಟ |
ಆಡೋಣ ಶಕ್ತಿಯನು ಗಳಿಸೆ ಶಂಕರನೊಡನಾಟ || ೫ ||

ನಮಗಾಗಿ ಕೊಟ್ಟಿಹನು ಶಂಕರನು ಎಲ್ಲವನು |
ಅರಿದರಿದು ಬಾವಿಯೊಳ್ ದುಡುಕಿದರೆ ಸುಖವೆಂದು ||
ಸುಧೆಯು ಸವಿಯುವುದನ್ನು ತೊರೆದು ನಾವ್ ವಿಷವನ್ನು
ಸೇವಿಸಲು ಸವೆಯುವುದು ಬರಿದೆ ನಮ್ಮೀ ಬಾಳು || ೬ ||

ಪ್ರಕೃತಿರಂಗದಿ ಬಾಳಿ ಸಂಪತ್ತು ಗಳಿಸೋಣ |
ಪ್ರಾಕೃತಿಕ ಭಾವದೊಳು ಸತ್ಯವನು ಕಾಣೋಣ ||
ಪ್ರಕೃತಿದೇವಿಯನೀಗ ಭಕ್ತಿಯಿಂ ಪೂಜಿಸುತೆ ||
ಸಚ್ಚಿದಾನಂದವ ಪಡೆದು ಹರುಷದಿಂ ನಲಿಯೋಣ || ೭ ||

ಸಾಗೋಣ ಒಮ್ಮನದಿ ಒಗ್ಗೂಡಿ ಮುಂದಕ್ಕೆ.|
ತುಳಿಯೋಣ ಹಿರಿಕಿರಿಯ ಭೇದವನು ಹಿಂದಕ್ಕೆ ||
ದೂಡೋಣ ಸು-ಸಮಾಜ ರಥವನ್ನು ಸಗ್ಗಕ್ಕೆ |
ಆದರ್ಶರಾಗೋಣ ನಿರುತ ಪ್ರಪಂಚಕೆ || ೮ ||

ದುಡಿಮೆಯೇ ಮಾನವನ ಬಾಳಿಗಿದು ಹಿರಿಬೆಳಕು |
ದುಡಿದಂತೆ ನಶಿಸುವದು ಮನಕೆ ಮೆತ್ತಿಹ ಕೊಳಕು ||
ದುಡಿಯಲಾರದ ದೇಹ ಬಿದ್ದಿರುವ ಹೆಣವಂತೆ |
ದುಡಿವವನದಾ ಬಾಳು ಕನಕದರ್ಪಣದಂತೆ || ೯ ||

ಎದ್ದೇಳಿ ನಡೆಯೋಣ ಭಕ್ತಿಭಿಕ್ಷೆಯ ಬೇಡಿ |
ಸಿದ್ಧರಿರಿ ನೀವೆಲ್ಲ ವಿರತಿಗಂಧವ ತೀಡಿ ||
ಶ್ರೀ ಜಡೆಯಶಂಕರನ ಭಜನೆಯುಂ ಸಲೆ ಮಾಡಿ |
ಶುದ್ಧಾತ್ಮರಾಗೋಣ ಮನವನ್ನು ಮಡಿ ಮಾಡಿ || ೧೦ ||

ಪ್ರೇಮಪ್ರೇರಣೆ ಧಾರುಣಿಗೆ ಚೇತನವ ಕೊಡುವುದು |
ಪ್ರಿಯ ಚೇತನಾದೇವಿಯಿಂದೆಮ್ಮ ಚಿತ್ತ ಶುದ್ಧಿಯಾಗಿಹುದು ||
ಪ್ರಚಲಿತ ಗುರುಪ್ರಕಾಶ ಪ್ರಭಾವಶಾಲಿ ಅಹುದು |
ಪ್ರಪಂಚದುದ್ಧಾರ ಶ್ರೀ ಶಂಕರಲಿಂಗನಿಂದಾಗುವುದು || ೧೧ ||

---

["ಉತ್ತಿಷ್ಠತ! ಜಾಗ್ರತ!! ಪ್ರಾಪ್ಯವರಾನ್ನಿಬೋಧತ!!!" ಇದು ಭಾರತೀಯ ಋಷಿಗಳ ಸ್ಫೂರ್ತಿಮಂತ್ರ. ಇದೇ ಮಂತ್ರಕ್ಕೆ ಇಂದಿನ ರೂಪವನ್ನು ಕೊಟ್ಟು "Awake! Arise! and Stop not till the goal is reached!" ಎಂದು ಸ್ವಾಮಿ ವಿವೇಕಾನಂದರು ಭಾರತಕ್ಕೆ ಪ್ರಪಂಚಕ್ಕೆ ಘೋಷಣೆಯ ಕರೆಯನ್ನಿತ್ತರು. ಇದೇ ಮಂತ್ರವನ್ನು ಕವನಕಾರರು ತನ್ನ ಶಬ್ದಗಳಲ್ಲಿ ಅಳವಡಿಸಿಕೊಂಡು ತಮ್ಮ ನಾಗಲಿಕ ಸಮಾಜಕ್ಕೆ ಅನ್ವಯಿಸಿಕೊಂಡು ಸಾರಿರುವರು. ಇಡೀ ಕವನವೊಂದು ಸ್ಫೂರ್ತಿದಾಯಕವಾದ ಮಂತ್ರ. ಮೋಹನಿದ್ರೆಯ ತೊರೆದು, ನೆಗೆದೆದ್ದು, ಟೊಂಕ ಕಟ್ಟಿ, ಎದೆಯುಬ್ಬಿಸಿ, ಸ್ವಪರರೆಂಬ ಹೀನ ಭೇದಭಾವವ ಭೇದಿಸಿ, ಪ್ರಕೃತಿಯನ್ನು ಮೆಚ್ಚಿ ಪೂಜಿಸಿ, ದುಡಿಯುತ್ತ ತಮ್ಮ ಪವಿತ್ರ ಕಾಯಕವ ಮಾಡುತ್ತ, ದೇವನನ್ನು ನೆನೆಯುತ್ತ, ಪರಮಪುರುಷಾರ್ಥಗಳನ್ನು ಸಾಧಿಸುವಾ-ಎನ್ನುವ ದಿವ್ಯ ಸಂದೇಶವನ್ನು ಕವನಕಾರರು ತಮ್ಮ ಸಮಾಜಕ್ಕೆ ಕೊಟ್ಟಿರುವರು.

ಈ ಕವನದ ಕೊನೆಯ ಪದ್ಯದಲ್ಲಿ "ಪ್ರೇಮಾ", "ಪ್ರೇರಣಾ", "ಗುರುಪ್ರಕಾಶ", "ಚೇತನಾ", "ಪ್ರತಿಭಾ" ಎಂಬ ತಮ್ಮ ಮೊಮ್ಮಕ್ಕಳ ಹೆಸರುಗಳನ್ನೆಲ್ಲ ಸಂದರ್ಭಕ್ಕೆ ಹೊಂದುವಂತೆ, ಅರ್ಥಕ್ಕೆ ಅನುಗುಣವಾಗುವಂತೆ, ರಸಕ್ಕೆ ಪೋಷಣೆಯಾಗುವಂತೆ ಮತ್ತು ಉದ್ದೇಶ ಸಾರ್ಥಕವಾಗುವಂತೆ ಒಳ್ಳೆ ಸ್ವಾರಸ್ಯವಾಗಿ ಕವನಕಾರರು ವರ್ಣಿಸಿರುವರು. ಜನ ಮೆಚ್ಚುವಂತೆ ಈ ಕವನವನ್ನು ಕವನಕಾರರ ಕುಟುಂಬದವರೂ ಮೆಚ್ಚಿರಲು ಸಾಕು.]

---

## ಸ್ವಜನರಿಗಾಗಿ—೩

### ಐಕ್ಯದಿಂದಿರಿ ಬದುಕಿ ಬಾಳಲು

ಕಾಲಕನುಗುಣವಾಗಿ ನಡೆಯಲು
ಸಾಲವಿಲ್ಲದ ಬಾಳು ಬೆಳೆಯಲು
ಸೋಲ ಸೋಲಿಸಿ ಗೆಲುವ ಪಡೆಯಲು
ಐಕ್ಯದಿಂದಿರಿ ಬದುಕಿ ಬಾಳಲು ||೧||

ಜಾಗೃತಿಯನು ಪೂರ್ಣ ಪಡೆಯಲು
ನೀತಿಯುತ್ತಮ ರೀತಿ ಗಳಿಸಲು
ಭೀತಿಯಿಲ್ಲದ ಬಂಟರಾಗಲು
ಐಕ್ಯದಿಂದಿರಿ ಬದುಕಿ ಬಾಳಲು ||೨||

ಭೂಮಿಯಿಂ ಬಹು ಧಾನ್ಯ ಬೆಳೆಯಲು
ಅನ್ನದಾನಿಗಳೆನಿಸಿಕೊಳ್ಳಲು
ಕಣ್ಣು ನಾಲಿಗೆ ಮನಗಳಾಳಲು
ಐಕ್ಯದಿಂದಿರಿ ಬದುಕಿ ಬಾಳಲು ||೩||

ಹುಟ್ಟು ಸಾವಿನ ಮಹಿಮೆ ತಿಳಿಯಲು
ಗುಟ್ಟಿನಿಂದಲಿ ಬಾಳಿ ಬದುಕಲು
ಬೆಟ್ಟದಂತೆದೆಗೊಟ್ಟು ನಿಲ್ಲಲು
ಐಕ್ಯದಿಂದಿರಿ ಬದುಕಿ ಬಾಳಲು ||೪||

ಸಹನೆ ಶೀಲಗಳನ್ನು ಪಡೆಯಲು
ಕಹಳೆ ಕೂಗಲು ಹುರುಪು ತಾರಲು
ಸ್ನೇಹದಿಂದಲೆ ಮುಂದುವರಿಯಲು
ಐಕ್ಯದಿಂದಿರಿ ಬದುಕಿ ಬಾಳಲು ॥ ೫ ॥

ಶಿಸ್ತಿನಿಂದಲೆ ಕಾರ್ಯಗೈಯಲು
ಹೊತ್ತೆ ಹೆಚ್ಚಿನ ಮುತ್ತು ತಿಳಿಯಲು
ಹೆತ್ತ ತಾಯಿಯ ಸೇವೆ ಗೈಯಲು
ಐಕ್ಯದಿಂದಿರಿ ಬದುಕಿ ಬಾಳಲು ॥ ೬ ॥

ಸ್ವಜನ ಸುಜನರ ಸೇವೆಗೈಯಲು
ವ್ಯಾಜ್ಯ ಬಡಿದಾಟಗಳ ನೀಗಲು
ಸತ್ಯದಿಂ ಶಿವ – ತತ್ವ ಬೀರಲು
ಐಕ್ಯದಿಂದಿರಿ ಬಾಳಿ ಬದುಕಲು ॥ ೭ ॥

---

[ ಐಹಿಕ, ವೈಯಕ್ತಿಕ, ಸಾಮಾಜಿಕ ಮತ್ತು ಸಾಮೂಹಿಕ ಹಿತ ಸಾಧಿಸಲು, ಸ್ವಜನ-ಸುಜನರ ಸೇವೆಗೈಯಲು, ಬಂಟರಾಗಿ ಬದುಕು ಬಾಳಲು ಹುಟ್ಟುಸಾವಿನ ಗುಟ್ಟು ತಿಳಿಯಲು ಮತ್ತು ಸತ್ಯದಿಂ ಶಿವತತ್ವ ಬೀರಲು ನಾವೆಲ್ಲರೂ ಐಕ್ಯದಿಂದ ಇರಬೇಕು. ಇದ್ದು ಮುಂದೆ ಸಾಗಬೇಕು, ಎಂಬ ಐಕ್ಯದ ಮಹಾಮಂತ್ರ ಈ ಕವನದಲ್ಲಿ ವ್ಯಕ್ತವಾಗಿದೆ.]

---

## ಸ್ವಜನರಿಗಾಗಿ—೪

### ಇದರೊಳಿಲ್ಲ ಅರಿವಿನ ಗುಟ್ಟಿದೆ

ಮುರಿದ ಒಲುಮೆಯ ಮೆರುಗುಗೊಳಿಸುವ
ಬರಿದು ಭಾವ ಸಮಾಜವು ॥ ಪಲ್ಲ ॥

ಬಾಳ ಗಿರಿಕಂದರರದ ಮೇಗಡೆ ಸ್ವಾರ್ಥದೊಲುಮೆಯ ಕತ್ತಲು ।
ಹಬ್ಬಿ ಮುಳುಗಿಸಿ ಎಲ್ಲ ಒಂದೇ ಎನುವ ಭ್ರಾಂತಿಯ ಬಿತ್ತಲು ॥

ಎಂದೊ ಒಮ್ಮೆಲೆ ಮಿಂಚುಮಿಂಚಲು ಹಾ ! ಅಗಾಧದ ಕಂದರ |
ನಮಗು ನಿಮಗೂ ಜನವು ಹಾಸಿದೆ ಮುಗಿಲಿನಗಲದ ಅಂತರ ||೧||

ಏನು ಒಲವೋ ಎಂಥ ಒಲವ್ವೋ ಬರಿಯ ಮಾಯದ ಮಂಪರ |
ಎದೆಗು ಎದೆಗೂ ನಡುವೆ ಹರಗಿದೆ ನೂರು ನೋವಿನ ಕಂದರ ||

ಆದರ ಮೇಲೂ ನಲಿವು ಕಾಣಲು ಸ್ನೇಹವೆನ್ನುವ ಸೇತುವೆ |
ಕಟ್ಟಿಕೊಂಡೆವು ಬಳಕೆಯಾದೆವು ಬಾಳ್ಗೆ ಬಾಳನು ಬೆಸೆದೆವು ||೨||

ಯಾವ ಸಿಡಿಲಿಗು ಜಗ್ಗದಿದ್ದುದು ಬರಿ ಪಟಾಕಿಯ ಸದ್ದಿಗೆ |
ಮುರಿಯಲಿರುತಿಹುದೀ ಸಮಾಜವು ಎನಿದೇನಚ್ಚರಿಯಿದೇನಿದು ||

ಎಷ್ಟು ಹತ್ತಿರವಾದ ಬಾಳಿದು ಎಷ್ಟು ದೂರಕೆ ಸರಿಯಿತು ?
ಒಲುಮೆಯಲ್ಲೂ ಬೇಕೆ ಸಂಯಮ? ಎಂಬ ಪ್ರಶ್ನೆಯು ಹುಟ್ಟಿತು ||೩||

ಒಲಿಯದಿರಲೊಳಿತಿತ್ತು ಎನಿಸದೆ ವಿರಹ ಮಾಡಿದ ನೋವಿಗೆ |
ಯಾವ ಪಾಪಕೆ ಯಾವ ತಪ್ಪಿಗೆ ಬಾಳಗೀ ಬಗೆ ದಂಡನೆ ? ||

ಒಲವೊ-ಹಗೆಯೊ-ಕರುಣೆ ಕ್ರೌರ್ಯವೋ ಯಾವುದೊಂದೂ ತಿಳಿಯದು |
ಇನಿತು ಕೋಟಲೆಯಲ್ಲಿ ಮಾನವ ಬಾಳುತಿಹುದೇ ಚೋದ್ಯವು ||೪||

ನಾನು ಅರಿತೆನು : ತಪ್ಪು ನಮ್ಮದು ಸ್ವಾರ್ಥದೊಲುಮೆಯು ನಮ್ಮದು |
ಅದಕೆ ತಳಹದಿ ಭದ್ರವಿರದಿರೆ ಮುರಿದು ಬೀಳದೆ ಗೋಪುರ ||

ಇಂಥ ವೇದನೆಯಿಂದ ಜೀವಕೆ ಬಂತು ಬಾಳಿನ ಅನುಭವ |
ತಿಳಿಯ ಒಲುಮೆಯನರಸಿ ನಡೆವುದು ಕಣ್ಣತುಂಬಿಸಿ ದಿವ್ಯವ ||೫||

ಇಳೆಯೊಳೆಲ್ಲೂ ಏಕೆ ನನಗೀ ಒಲುಮೆ ದೊರೆಯದ ವೇದನೆ |
ಎತ್ತ ಹೋದರು ಮರುಳಗಾಡೆ ಕರುಣೆಯಿಲ್ಲದೆ ಕ್ರೌರ್ಯವೆ ||
ತಾಯ ಪ್ರೀತಿಯ ತೆರದಿ ತಿಂಗಳ ಬೆಳಕು ಎಲ್ಲೆಡೆ ಹಬ್ಬದೆ |
ಕರುಣೆನೇಹದ ಬಲದಿ ಪ್ರೀತಿಯ ತೋಳಿನಲ್ಲಿದು ತಬ್ಬದೆ ||೬||

ಇರುವ ದೋಷವನೆಲ್ಲ ಮನ್ನಿಸಿ ಒಲಿವ ರೀತಿಯದೊಂದಿದೆ |
ಇರುವ ದೋಷವ ತಿದ್ದಿ ಸರಿಪಡಿಸುತ್ತ ಒಲಿಯುವದೊಂದಿದೆ ||

ಎರಡು ತೆರದಲಿ ದಿಟದ ಒಲುಮೆಯು ಬಂದು ಬಾಳನು ತೊಳೆಯುತ |
ಮೇಲಕೆತ್ತದೆ ಹೋದರೆಮ್ಮಯ ಬಾಳಿಗೆಲ್ಲಿಯು ಬಿಡುಗಡೆ || ೭ ||

ಬೆಳಕು ಕತ್ತಲ ಸಮರ ಸಾಗಿದೆ ಇಂದಿಗೂ ಕೊನೆಗಾಣದೆ |
ಕಡೆಗೆ ಬೆಳಕೇ ಗೆಲುವುದೆಂಬುದು ದಿನವು ಕಣ್ಣಿಗೆ ಕಂಡಿದೆ ||

ಇರುಳ ಮುಗಿಲಲಿ ಬೆಳಕು ತಾರೆಯು ನೂರು ಧ್ವಜಗಳ ನೆಟ್ಟಿದೆ |
ಇದನು ತಿಳಿವುದೆ ತಿಳಿವು ಎನಿಸಿದೆ ಇದರೊಳಲ್ಲವು ಗುಟ್ಟಿದೆ || ೮ ||

---

[ನಮ್ಮನಮ್ಮವರು ಎಂದು ನೆಚ್ಚಿನಲಿದು ನಾವು ಯಾರನ್ನು ನಂಬಿ ಹಿತಗೈಯಲೆಳಸುವೆವೋ ಅಂಥ ನಮ್ಮವರಲ್ಲಿ ಮತ್ತು ನಮ್ಮಲ್ಲಿ ಒಮ್ಮೊಮ್ಮೆ ತಪ್ಪು ತಿಳಿವಳಿಕೆ ಮೂಡಿ ಹರಡಿ ಮನವು ಬೇಗುದಿಗೊಳ್ಳುವ ಒಂದು ಭಾವ ಈ ಕವನದಲ್ಲಿ ಅಡಕವಾಗಿದೆ. ನಾವು ಗೈದ ಸೇವೆ ಸಾರ್ಥಕವೆನಿಸದೆ, ಮಾಡಿದ ಹಿತ ಹಿತವೆನಿಸದೆ ಎಂಥ ನಿಸ್ವಾರ್ಥ ಸೇವೆಗೂ, ಒಲುಮೆಯ ಭಾವನೆಗೂ ದೋಷಾರೋಪಣೆ, ಮಿಥ್ಯಾದೋಷಾರೋಪಣೆ ಪ್ರತಿಫಲವಾಗಿ ದೊರೆತರೆ ಮನಸು ಈ ಕವನದಲ್ಲಿ ಕಾಣುವಂತೆ ಕಂಗೆಟ್ಟು, ಕೊರಗಿ ಮರುಗುವುದರಲ್ಲಿ ಸೋಜಿಗವೇನಿಲ್ಲ, ಬೆಳಕು ಕತ್ತಲೆಗಳ ಕೊನೆಯಿಲ್ಲದ ಸಮರದ ಅಂಗಣವಾದ ಈ ಬಾಳಿನಲ್ಲಿ ಇರುವ ದೋಷವನ್ನೆಲ್ಲ ಮನ್ನಿಸಿ ಒಲಿವ ರೀತಿಯೊಂದಿದೆ. ಇದನು ತಿಳಿವುದೇ ತಿಳಿವು ಎನಿಸಿದೆ. ಇದರೊಳಲ್ಲವು ಒಲವಿನ, ಬಾಳಿನ ಗುಟ್ಟಿದೆ— ಎಂಬ ಸ್ಫೂರ್ತಿದಾಯಕವಾದ ಸತ್ಸಂದೇಶದ ಆಶಾವಾದದೊಂದಿಗೆ ಈ ಕವನ ಕೊನೆಗೊಂಡಿದೆ.]

---

## ಸ್ವಜನರಿಗಾಗಿ—೫

### ನಾವು ನಮ್ಮವರು

ನೆನಸುವಂತಹುದಲ್ಲ | ಮರೆಸುವಂತಹುದಲ್ಲ |
ಎದೆಗಡರ್ದ ದಾವಾಗ್ನಿ ಲಕ್ಷದಾ ಕತೆಯು |
ಒಂದೆಡೆಗೆ ಮುಗುಳು ನಗೆ | ಒಂದೆಡೆಗೆ ಕಂಬನಿಯು |
ಏನೊಂದು ಅಹಹಹ | ಲಕ್ಷದಾ ಕತೆಯು || ೧ ||

ಹೇಳುವಂತಹದಲ್ಲ | ಕೇಳುವಂತಹದಲ್ಲ |
ಒಳಗೊಳಗೆ ವೇದ್ಯ ವೀ | ಲಕ್ಷದಾ ಕತೆಯು |



"ಶ್ರೀ ಜಡೆಯ ಶಂಕರಲಿಂಗ ಬ್ಯಾಂಕು" ಸ್ಥಾಪನೆಗಾಗಿ ಶ್ರೀ ಶಿವಲಿಂಗಪ್ಪನವರು
ಒಂದು ಲಕ್ಷ ರೂ. ಗಳನ್ನು ಕೊಡುಗೆಯಾಗಿ ವಿಶ್ವಸ್ತರ ಕೈಗೆ ಸಮರ್ಪಿಸಿದ ಸನ್ನಿವೇಶ

ಬರಡು ಸಂಸ್ಕಾರಗಳು | ಮನದ ದುಷ್ಪಾಪಗಳು |
ಬಿತ್ತಿದಾ ಬೆಳೆಯಿದ್ದೈ | ಲಕ್ಷದಾ ಕತೆಯು ‖ ೨ ‖

ಬಳಸಿ ಸಂಸ್ಕಾರಗಳ | ಎಳತದಾ ವಿಕಾರಗಳ
ಒಳಒಳಗೆ ಮನಸಾರೆ ತೆಗಳಬೇಕು |
ಮುನ್ನ ಅದೃಷ್ಟಕ್ಕವರು ಏನು ಮಾಡುವುದೆಂದು
ಹಳೆಯ ರಾಗವ ಹಾಡಿ ಅಳಲುಬೇಕು ‖ ೩ ‖

ಸುಡಲೆಲವೊ ಸುಡುವೆಲವೊ | ಜನಮನವು ಒಣಮರವೆ |
ಕರಕು ಉರಿದೀಗಲೇ ಬೂದಿಯಾಗು |
ಬೂದಿಯಾಗುತ ಗಾಳಿಯಲಿ ಬೆರೆದು ದೆಸೆದೆಸೆಗೆ |
ಹರಡಿ ಹೆಸರಿಲ್ಲದೊಲು ಮಾಯವಾಗು ‖ ೪ ‖

ಕೂಡಿದ್ದು ಅಗಲುವದು | ಅಗಲಿದ್ದು ಕೂಡುವದು |
ಮೇಳ ವಿರಹಗಳೆರಡು ಜಗದ ನಿಜ ಧರ್ಮವೈ |
ಆವ ಸಂಗವುಮಿಲ್ಲದಾತ್ಮಕ್ಕೆ ಭಾವಿಪೊಡೆ |
ವ್ಯವಹಾರದೊಳಗೆಲ್ಲ ಈ ಪರಿವುಂಟು ‖ ೫ ‖

ಬಳಗದೊಡನಾಡುವದು | ಜನಗಳಲಿ ಬಾಳುವದು |
ಅಸಮಾಧಾನದ ಸುಖವಿದಕನುಭವವೇ ಸಾಕ್ಷಿ |
ಸಂಘಜ್ಞಾನದ ಬಲದಿ ವ್ಯವಹಾರ ಕರ್ತವ್ಯ |
ನಿಜ ದಾರಿಯಿಂ ಕಂಡು ಲಕ್ಷವನು ನಿಶ್ಚೈಸಲದುವೆ ಸಾಕ್ಷಿ ‖ ೬ ‖

---

[ ತಮ್ಮ ಸಮಾಜದ ವಾಣಿಜ್ಯೋದ್ಯಮಗಳ ಅಭಿವೃದ್ಧಿಗಾಗಿ ಶ್ರೀ ಹೆರಲಗಿ ಶಿವಲಿಂಗಪ್ಪನವರು ಒಂದು ಲಕ್ಷ ರೂಪಾಯಿಗಳನ್ನು ಕೊಡುಗೆಯಾಗಿ ದಯಪಾಲಿಸಿ ವಿಶ್ವಸ್ತರ ಕೈಯಲ್ಲಿ ಸಮರ್ಪಿಸಿದರು. ಆ ಹಣವನ್ನೇ ಬಂಡವಾಳವನ್ನಾಗಿ ಮಾಡಿ ಒಂದು ಬ್ಯಾಂಕನ್ನು ಸ್ಥಾಪಿಸಲಾಯಿತು. ಆದರೆ ವಿಶ್ವಸ್ತರ ಮತ್ತು ಆಡಳಿತೆಗಾರರ ಲೋಪದೋಷಗಳಿಂದಲೋ ಇನ್ನಾವ ಕಾರಣವಿಂದಲೋ ಆ ವಿಶ್ವಸ್ತ ನಿಧಿಯ ಸದುಪಯೋಗವು ಸಮಾಜಕ್ಕೆ ಆಗದೆ ಆ ನಿಧಿ ಬಹಳ ಮಟ್ಟಿಗೆ ಕರಗಿ ಹೋಯಿತು. ಸತ್ಪರಿಶ್ರಮದಿಂದ ಸಂಪಾದಿಸಿದ ಸಂಪತ್ತಿನಲ್ಲಿಯ ಬಹು ಭಾಗವನ್ನು ತಮ್ಮ ಸಮಾಜದ ಸೇವೆಗೆ ಉದ್ಧಾರಕ್ಕೆ ಕೊಡುಗೆಯೆಂದು ನೀಡಿದಾಗ ಅದರ ಗತಿ ಹೀಗಾದುದನ್ನು ನೋಡಿ ಕಳವಳದಿಂದ ಕುದಿದು ಹೋದ ಅವರ ಹೃದಯದ ದಾರುಣ ವೇದನೆ ಈ ಕವನದಲ್ಲಿ ರೂಪ ತಾಳಿದೆ. ಈ ಮತ್ತು ಇದರ ಹಿಂದಿನ ಕವನದಲ್ಲಿ ಈ ವೇದನೆ ಮೊಗದಾಳಿ ಮೊರೆದಿದೆ. ಆದರೆ ಸಂಘಸಮಾಜಗಳ ವ್ಯವಹಾರದೊಳಗೆಲ್ಲ ಈ ಪರಿ ಅನುಭವ ಒಮ್ಮೊಮ್ಮೆ ಬರುವುದೇ ಉಂಟು ಎಂಬ ಈ ಜ್ಞಾನದ ಬಲದಿಂದ ವ್ಯವಹಾರದಲ್ಲಿ ನಮ್ಮ ಕರ್ತವ್ಯವನ್ನು ಅರಿತುಕೊಂಡು ನಿಜ ದಾರಿಯಿಂದ ಗುರಿಯನ್ನು ಕಾಣಬೇಕೆಂಬ ಧೀರ ಆಶಾವಾದದಲ್ಲಿ ಕವನ ಕೊನೆಗಂಡಿದೆ.]

---

## ಸ್ವಜನರಿಗಾಗಿ—೬

### ನಾವೆಲ್ಲರೂ ಒಂದು

ನಮ್ಮವರು ಎಂದೆಲ್ಲ | ನನ್ನ ಸ್ವಾರ್ಥಕ್ಕಲ್ಲ |
ನಾವೆಲ್ಲರೊಂದೆಂಬ ಆತ್ಮಭಾವ | ॥ ೧ ॥

ತಮ್ಮ ಹಿತ ಮಿತಗಳಿಗೆ | ಶಿಸ್ತು ಸಂಘಟನೆಗೆ |
ಮುಡಿಪಾಗಲೆಂಬುದೇ ಸರ್ವಜೀವ ॥ ೨ ॥

ಆದ ಮನವರಿಕೆಯಲಿ | ಹೊಳೆದಂಥ ಬೆಳಕಿನ |
ತ್ಯಾಗವೇ ಇದು ಎಂದು ಅಂದುಕೊಂಡು ॥ ೩ ॥

ನಮ್ಮ ಸಮಾಜವು ಇಂದು | ಒಂದಾಗಿ ಬೆಸೆವುದು ಎಂದು ? |
ಜನಜೀವನದ ಏರಿಳತಕ್ಕೆ ಹೊಂದಿಕೊಂಡು ॥ ೪ ॥

ಸರ್ವ ಮಾನವ ಕುಲದ | ಸರ್ವಸ್ವ ಸದಾ ಮಂಗಲ |
ತೋಟ ಇಲ್ಲಾಗುವದೆ ಹೂವು ಹಣ್ಣು ? ॥ ೫ ॥

ಎದೆಯು ಎದೆಯನ್ನರಿತು | ಒಲವೆಲ್ಲರಲಿ ಪೊಳೆತು |
ಏಳ್ಗೆಹೊಂದುವದೊಂದೆ ದಿವ್ಯ ಕಣ್ಣು || ೬ ||

ಯಾರು ಯಾರಿಗು ಎಂಥ | ಹೊಣೆಯಲ್ಲ ನೋಡಿಂಥ |
ಮಾತು ಸರಿಯೇ ಅಲ್ಲ ಸಾಕು ಮಾಡೋಣ || ೭ ||

ಎಲ್ಲರೊಳು ತಪ್ಪಿಲ್ಲ | ಅಂತೆ ನಡೆದಿಹುದೆಲ್ಲ |
ಆದುದಾಯಿತು ಏಳ್ಗೆಗೆ ಮುಂದೆ ಸಾಗಿರಣ್ಣ || ೮ ||

ಜಗದೊಡೆಯ ತಾನಾಗಿ | ಜಗಜೀವಿಗಳಿಗಾಗಿ |
ಜಡೆಯ ಶಂಕರಲಿಂಗ ಅವತರಿಸುವದಾಗಿ || ೯ ||

---

[ ಧೀರ ಆಶಾವಾದದ ಪರಿಣಾಮ ಈ ಕವನದಲ್ಲಿ ಮೂಡಿದೆ. ನಮ್ಮವರು ನಮ್ಮ ಹೀನ ಸ್ವಾರ್ಥಕ್ಕಲ್ಲ. ನಾವು ನಮ್ಮವರು ನಮ್ಮ ನಮ್ಮ ಹಿತಸುಖಗಳಿಗೆ ಸಹಕಾರಿಗಳಾಗಿ ಸಮಾಜದಲ್ಲಿ ಬಾಳಬೇಕು. ಯಾರು ಯಾರಿಗೆ ಹೊಣೆ ಎಂಬ ಮಾತು ಸರಿಯಲ್ಲ, ಇದನ್ನೆಲ್ಲ ಸಾಕು ಮಾಡಿ ಎಲ್ಲರೊಳು ತಪ್ಪಿಲ್ಲ. ಆದುದಾಯಿತು ಏಳ್ಗೆಗೆ ಮುಂದೆ ಸಾಗಿರಣ್ಣಾ - ಎಂದು ತಮ್ಮ ತಮ್ಮವರಿಗೆ ಕವನಕಾರರು ಹೇಳಿಕೊಂಡಿರುವರು. ]

---

## ಸ್ವಜನರಿಗಾಗಿ—೭

### ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮರೆಯಲಿ

ಹೆಣ್ಣು ಬೇಡೆ, ಹೊನ್ನು ಬೇಡೆ, ಮಣ್ಣು ಬೇಡಲಾರೆನು |
ಸಿರಿಯ ಬೇಡೆ, ಸುಖವ ಬೇಡೆ, ಸ್ವರ್ಗ ಬೇಡಲಾರೆನು |
ಮಾನ ಬೇಡಿ, ಕೀರ್ತಿ ಬೇಡಿ, ಅಮರನಾಗಲಾರೆನು |
ಎಲ್ಲರಂತೆ ಒಳಿತನೊಂದು ಬೇಡಿ ಬೇಡಿ ಕಾಡೆನು |
ಆದರಾನು ಬೇಡಿಕೊಳುವುದೊಂದು ನಿನ್ನ ಬಳಿಯಲಿ
ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮರೆಯಲಿ || ೧ ||

ನಾಗಲೀಕರೆಲ್ಲರೆನಗೆ ಅಣ್ಣತಮ್ಮದಿರಲ್ಲವೇ !
ನಾಗಭೂಷಣನೇ ಸಮಾಜವು ಬಂಧುಬಳಗವಿದಲ್ಲವೇ !
ಅವರ ಸುಖವೇ ನನ್ನ ಸೌಖ್ಯವು ಅವರ ದುಃಖವೇ ನನ್ನ ದುಃಖವು |

ಅವರ ಚಿಂತೆಯುು ನನ್ನ ಚಿಂತೆಯುು ಸತ್ಯ ಸತ್ಯವು ಸತ್ಯವು |
ಆದರಾನು ಬೇಡಿಕೊಳ್ಳುವದೊಂದೆ ನಿನ್ನ ಬಳಿಯಲಿ |
ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮೆರೆಯಲಿ || ೨ ||

ಕಷ್ಟನಷ್ಟ ಬೇಡವೆನಗೆ ಸಾವ-ನೋವನೊಲ್ಲೆನು |
ಎನ್ನಬಹುದೇ? ಮರುಳನಂತೆ ಇಲ್ಲ; ನಾನು ಒಲ್ಲೆನು |
ಕಷ್ಟ-ನಷ್ಟ-ರೋಗ ರುಜನ ಸಾವು ನೋವು ಎಲ್ಲವು |
ಹುಟ್ಟಿಬಂದ ಮೇಲೆ ನಮಗೆ ಬಾರದಿರುವುದಿಲ್ಲವು |
ಆದರಾನು ಬೇಡಿಕೊಳುವುದೊಂದೆ ನಿನ್ನ ಬಳಿಯಲಿ |
ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮೆರೆಯಲಿ || ೩ ||

ಹುಟ್ಟು ಗುಣಗಳನ್ನು ನಾನು ಹಳಿವುದೆಂತು ತಿಳಿಯದೆ |
ಹಳಿದರೇನು ಹೋಗಬಹುದೆ ಇಹದ ಋಣವು ತೀರದೆ |
ನಾಯಬಾಲ ಡೊಂಕು ಇರಲು ಕಂಬಿಕಟ್ಟಿ ಕಳೆವುದೇ?
ಹರಿವ ಗುಣವು ನೀರಿಗಿರಲು ಒಡ್ಡುಹಾಕಿ ತಡೆವುದೇ?
ಆದರಾನು ಬೇಡಿಕೊಳುವುದೊಂದೆ ನಿನ್ನ ಬಳಿಯಲಿ |
ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮೆರೆಯಲಿ || ೪ ||

ದೇಹ ಗುಣಗಳೇನು ಉಂಟೋ ಆಗಿ ತೀರಬೇಕೆಲ್ಲೈ |
ದೇಹ ಹೊತ್ತ ಜೀವವದನು ಉಂಡು ನೀಗಬೇಕಲ್ಲೈ |
ಬರುವದೆಲ್ಲ ಬರಲಿ ಬರಲಿ, ಬೇಡವೆನ್ನಲಾಗದು |
ಎಂದರೇನು ಬಂದುದೆಲ್ಲ ಬಿಟ್ಟುಹೋಗಲಾರದು |
ಆದರಾನು ಬೇಡಿಕೊಳ್ಳುವುದೊಂದೆ ನಿನ್ನ ಬಳಿಯಲಿ |
ಜಡೆಯ ಶಂಕರಲಿಂಗ ಮೂರುತಿ ಮನದಲೆನ್ನೀ ಮೆರೆಯಲಿ || ೫ ||

———

[ಅಂತರ್ವೇದನೆಯಿಂದ ಉಕ್ಕಿ ಬಂದ ವಿಚಾರಗಳು ಕವನಕಾರರನ್ನು ಈ ಕವನದಲ್ಲಿ ಅಂತರ್ಮುಖಿಯನ್ನಾಗಿ ಮಾಡಿವೆ. ಯಾರ ದೋಷವನ್ನೇನು ಎಣಿಸುವದು? ಮಾನವನಲ್ಲಿಯ ಸತ್ವರಜ ತಮ ಎಂಬ ತ್ರಿಗುಣಗಳು ತ್ರಿಕಾಲದಲ್ಲಿಯೂ ತಮ್ಮ ತಿಕ್ಕಾಟವನ್ನು ತೋರಿಯವು. ದೇಹಗುಣಗಳೇನು ಉಂಟೋ ಅವು ಆಗಿತಿರಲೇಬೇಕು. ನಾಗಲೀಕರೆನಗೆ ಅಣ್ಣತಮ್ಮಂದಿರು. ಅವರ ಸುಖವೇ ನನ್ನ ಸುಖ. ಅವರ ದುಃಖವೇ ನನ್ನ ದುಃಖ. ಬರುವುದೆಲ್ಲ ಬರಲಿ. ಬೇಡವೆನ್ನಲಾಗದು. ಬೇಡವೆಂದರೆ ಬಂದುದು ಬಿಟ್ಟು ಹೋಗುವುದೇ? ಇಂಥದೇ ಬೇಕೆಂಬ ಹಟವಿಲ್ಲ. ಬೇಡವೆಂಬ ಹಟವೂ ಇಲ್ಲ. ಆದರೆ ಭಗವಂತನಲ್ಲಿ ಒಂದೇ ಬೇಡಿಕೆ: 'ಜಡೆಯಶಂಕರಲಿಂಗ ಮೂರುತಿ ಮನದಲೆನ್ನೀ ಮರೆಯಲಿ, ಎಂದು ಕವನಕಾರರು ಅಂತರ್ಮುಖರಾಗಿ ಕವನದಲ್ಲಿ ಪಲ್ಲಪಲ್ಲವಿಗೂ ಹಾಡಿದ್ದಾರೆ.]

———

# ಸ್ವಜನರಿಗಾಗಿ—೮

## ಸಮರಸದ ಮುಕ್ತಿಸಿರಿ

ತಾಯ ಬಸಿರಿನಿಂ ಮಾನವನು ಮೈದಳೆದು ।
ಅಳಿಯುವನು ಮೈ-ಮನದ ಸ್ವಾತಂತ್ರ್ಯವನು ।
ಜೀವಿಯಾದಂದಿನಿಂ ಸಾವು ಬರುವರೆಗೂ ।
ಆಶ್ರಯಿಸಿ ಬಾಳ್ದಪನು ಪರತಂತ್ರವನು ॥ ೧ ॥

ಶಿಶುವಿರಲು ತಾಯಾಗಿ ಮನಪೊಸೆದು ಮೊಲೆಯೀಯೆ
ಹಸಗೂಸು ಹಾಲುಂಡು ನಲಿಯಬಹುದು ।
ಬಸವಳಿದು ಬೇಸೆಯಲಿ ಮಾತೆ ಮನಗೊಡದಿರಲು ।
ಹಸುಳೆ ಕಸವಿಸಿಗೊಂಡು ನರಳಬಹುದು ॥ ೨ ॥

ಬಾಲ್ಯದಲಿ ಬಂಧುಜನರೊಲಿದು ವಿದ್ಯೆಯ ಕಲಿಸೆ ।
ದುಡಿದು ಧನವನು ಪಡೆದು ಸುಖಿಸಬಹುದು ।
ಇಲ್ಲದಿರೆ ಹತಮನುಜ ಹೊಟ್ಟೆಹೊರೆವುದಕಾಗಿ ।
ಅನ್ಯಿಗರ ಅಳುಕಿನಲಿ ದುಡಿದು ತೊಳಲಬಹುದು ॥ ೩ ॥

ಪದವಿಧರನೆಂದು ಅಧಿಕಾರ ನಡೆಸುವರೆ ।
ನ್ಯಾಯಗೈದರೆ ಯೋಗ್ಯಪದವು ಬಹುದು ।
ಹಿರಿಯ ಅಧಿಕಾರಿಗಳ ಒಲುಮೆ ಇಲ್ಲದಿರಲು ।
ಕರಡು ಗೀಚುವ ಕಾರಕೂನನ ಹುದ್ದೆ ತಪ್ಪದು ॥ ೪ ॥

ಪ್ರಾಯದಲಿ ಕೈವಿಡಿದ ಜೀವನದ ಜೊತೆಗಾರ್ತಿ ।
ಸ್ನೇಹ ಮಾಧುರ್ಯವ ಬೀರೆ ಸುಖಿಸಬಹುದು ।
ಅನುರಾಗವರಿಯದಿಹ ಸತಿಸುತರ ಸಂಗದಲಿ ।
ಜೀವನವು ಘನಘೋರ ರಣರಂಗವಾಗಲುಬಹುದು ॥ ೫ ॥

ಇಂತು ಮನುಜನ ಬಾಳು ಪರತಂತ್ರ ಪಾಶದಲಿ ।
ಸಿಲುಕಿ ಪಡುತಿದೆ ಬನ್ನ ಭವಣೆಯನು ।
ಸ್ವಶ್ರಮದಿ ಸಾಧಿಸಿದ ನರನ ಗೈಮೆಗಳೆಲ್ಲ ।
ಆಶ್ರಯಿಸಿ ಬಾಳ್ದಪವು ತನ್ನರಿವೆ ಆಶ್ರಯದಿ ॥ ೬ ॥

ನರಜನ್ಮ ಪರತಂತ್ರವಹುದೆಂದು ಕೊರಗುವದೆ ? ||
ಮನದಿ ನಿಜ ಸ್ವಾತಂತ್ರ್ಯದರಿವು ಮೂಡಿರಲು |
ಪರರಿಚ್ಛೆಯಲಿ ನಡೆವ ಬರಡು ಬಾಳುವೆಯೆಂತು |
ಸ್ವಾವಲಂಬನ ಸಿರಿಯು ನೆರವು ನೀಡಿರಲು || ೭ ||

ನಿಜದಿ ರಕ್ಷಿಸೈ ಶಂಕರಲಿಂಗ ಜೋರಾಪುರದ ಭಕ್ತಬಳಗ |
ವಿಜಯಪುರದ ನಿನ್ನ ಸ್ಥಾಪನೆಯ ವಿಜಯೋತ್ಸವ |
ನಾಗಭೂಷಣನೆ ನಾಗಲೀಕರಿಗೆ ಕರುಣಿಸು ನವಚೇತನವ |
ಭೋಗ ಮೋಕ್ಷಾರ್ಥಂಗಳ ಇಷ್ಟಾರ್ಥ ಸಕಲ ಸಂಪದವ || ೮ ||

ಮೋಹಪಾಶವನು ಬಿಸುಟದೆ
ಪರಲೋಕಕೆ ಹೊರಡಬಹುದೆ ? |
ಜಿಜ್ಞಾಸೆಯಲಿ ಮನವಿಟ್ಟು
ನಡೆವುದೇ ನಮ್ಮಗುರಿ |
ತೊರೆದು ಪರತರ ಫಲದಾಸೆಯನು |
ಸತ್ಕರ್ಮಗಳೆಡೆಗೆ |
ಸಾಗುವದು ಸಮರಸದ ನಿಜಮುಕ್ತಿಸಿರಿಯು || ೯ ||

---

[ ಪರಾವಲಂಬಿಯಾಗಿ ಸಮಾಜಜೀವನದಲ್ಲಿ ಬಾಳಬೇಕಾಗಿರುವ ಮಾನವನ ಬಾಳಿನಲ್ಲಿ ಹಿರಿಕಿರಿಯ ಆಸೆನಿರಾಸೆ, ಸಿಹಿಕಹಿ, ಸುಖದುಃಖ ಎಲ್ಲವೂ ಕಟ್ಟಿ ಇಟ್ಟೇ ಇರುತ್ತದೆ. ಆದರೆ ನರ ಜನ್ಮ ಪರತಂತ್ರವೆಂದು ಕೊರಗಿ ಮಾಡುವುದೇನು ? ಸ್ವಾತಂತ್ರ್ಯದ ಅರಿವು ಮೂಡಿದ ಮೇಲೆ ಸ್ವಾವಲಂಬನದ ಬಲವನ್ನು ತಂದುಕೊಂಡು ಜಿಜ್ಞಾಸೆಯಲ್ಲಿ ಮನವಿಟ್ಟು ಪರತರ ಫಲದಾಸೆ ಯನ್ನು ತೊರೆದು ಸತ್ಕರ್ಮವನೆಸಗುತ ಸಾಗುವುದೇ ಸಮರಸದ ನಿಜಮುಕ್ತಿಯ ಸಿರಿ ಎಂದು ತಮ್ಮ ಸಮಾಜಕ್ಕೂ ಮಾನವ ಸಮಾಜಕ್ಕೂ ನಿಷ್ಕಾಮಕರ್ಮದ ಸಂದೇಶವನ್ನು ನೀಡಿರುವರು ಕವನಕಾರರು. ]

---

## ಸ್ವಜನರಿಗಾಗಿ—೯

### ಸ್ವಾರ್ಥ–ಪರಾರ್ಥ–ಪರಮಾರ್ಥ

ಚಿತ್ತಸ್ಥ ಸಕಲಾರ್ಥಾನಾಂ ಮನನಂ ಯತ್ತು ಮಾನಸೆ |
ತದರ್ಪಣಂ ಶಿವೇ ಸಾಕ್ಷಾನ್ಮಾನಸೋ ಭಾವ ಉಚ್ಯತೆ ||
ಸ್ವಾರ್ಥವಿಲ್ಲದ ನರನು ಸುಖ ಕಾಣ್ಬನೆ ? |
ವ್ಯರ್ಥ ಓದಿದ ನರನು ನಿಧಿನೋಳ್ಪನೆ ? || ಪಲ್ಲ ||

ಉಣ್ಣುವದರಲ್ಲಿ ಸ್ವಾರ್ಥ, ಉಡುಪಿನಲ್ಲಿಯು ಸ್ವಾರ್ಥ |
ಚೆನ್ನಾದ ಬದುಕು ಬಾಳಿ |
ಬಣ್ಣ ಬೇರಿರಬಹುದು ಮೋಕ್ಷಸಾಧಕನಲ್ಲಿ |
ನುಣ್ಣಗೆ ಸ್ವಾರ್ಥದಿಂ ಮನುಜ ದೂರೆಲ್ಲಿ ? || ೧ ||

ಇಡಬಹುದು ದೇವನಲಿ ಸ್ವಾರ್ಥದಾರೋಪ |
ಕೊಡಬಹುದು ರಾಜ, ಸಚಿವರಿಗೆ ಬಹುರೂಪ |
ಸಡಗರದ ಧನಿಕ ಸ್ವಾರ್ಥದಿ ಪಡುವ ತಾಪ |
ಬಡವನಲ್ಲಿ ಇದು ಭವ್ಯ ಭೂತ ಭೂಪ || ೨ ||

ಸ್ವಾರ್ಥದಿಂ ಪರಮಾರ್ಥ, ಸ್ವಾರ್ಥಜೀವನ ವ್ಯರ್ಥ |
ಸ್ವಾರ್ಥವಂ ಜರೆಯುವರು ತಿಳಿಯದಿರದರ್ಥ |
ಸ್ವಾರ್ಥದಿಂ ಪರಹಿತವ ಸಾಧಿಪುದೆ ಪರಮಾರ್ಥ |
ಸ್ವಾರ್ಥದಿಂ ಪರಹಿತವ ಕೆಡಿಪುದೆ ವ್ಯರ್ಥ || ೩ ||

---

[ "ಸ್ವಾರ್ಥ" ಎಂಬ ಶಬ್ದದ ಸರಿಯಾದ ಅರ್ಥವನ್ನು ತಿಳಿಯದ ಜನ ಹಲಕೆಲವು ಸಲ ಯಾರೊಬ್ಬರ ಯಾವುದೊಂದು ಕಾರ್ಯಕ್ಕೂ "ಸ್ವಾರ್ಥ", "ಸ್ವಾರ್ಥ" ಎಂದು ಅನ್ಯಾಯವಾಗಿ ದೂರುವುದುಂಟು. ಸ್ವಾರ್ಥ ಸಾಧನೆಗಾಗಿ ಪರಾರ್ಥವನ್ನು ಕೆಡಿಸುವುದು ನೀಚ ಸ್ವಾರ್ಥವೇ. ಉಚ್ಚ ಸ್ವಾರ್ಥದ ಅಹಮಹಮಿಕೆಯಿರದೆ ಪ್ರಪಂಚದಲ್ಲಿ ಯಾವ ಪ್ರಗತಿಯೂ ಆಗದು. ತನ್ನದು, ತನ್ನದು ಎಂಬ ಭಾವನೆಯಿಂದ ತನ್ನ ಸಮಾಜದ, ತನ್ನ ದೇಶದ ಕಾರ್ಯವನ್ನೆಸಗುವದು ಉಚ್ಚ ಸ್ವಾರ್ಥ (enlightened Selfishness) ವಲ್ಲದೆ ಮತ್ತೇನು ? ಇಂಥ ಸ್ವಾರ್ಥದಿಂದ ಪರಾರ್ಥವೂ ಸಾಧಿಸುವುದು, ಪರಮಾರ್ಥವೂ ಸಾಧಿಸುವುದು ಎಂಬುದು ಈ ಕವನದ ಆಶಯವಾಗಿದೆ. ]

---

## ಸ್ವಜನರಿಗಾಗಿ—೧೦

### ಇದುವೆ ನಿಜ ಜೀವನಾ

ಕಳೆದು ಕಣ್ಮರೆಯಾದ ಹೊಂಗನಸ ನೆನೆನೆನೆದು |
ಅಳಿಯೆ ಆಶಾಂಕುರವು ನೈರಾಶ್ಯವನು ತಳೆದು ||
ಬಾಳೆಲ್ಲ ಹಾಳೆಂಬ ಹುಚ್ಚು ಭಾವನೆ ಹೊಳೆದು |
ಬಾಳ ಏರಿಳಿತಕ್ಕೆ ವೈರಾಗ್ಯವನು ತಳೆದು || ೧ ||

ಜೀವನದ ಸತ್ಯ-ಶಿವ-ಸೌಂದರ್ಯಗಳ ಜರೆದು |
ಜೀವನದಿ ಕರ್ತವ್ಯ-ಪಾಲನೆಯ ಮರೆದು |
ಸರ್ವಸುಖ ಬಲಿಗೊಟ್ಟು ಆತ್ಮವಂಚನೆಗೈದು |
ಜೀವಿಸಿದ ಜೀವನವು ಜೀವನವದಲ್ಲ || ೨ ||

ಮಾನವರು ನಾವೆಲ್ಲ ಮಾನವತೆಗಿಂದಾಗಿ |
ಸೋಲು ಗೆಲವುಗಳಿರಲಿ ಸುಖದುಃಖಗಳೆ ಬರಲಿ |
ಎಲ್ಲ ಸಿಹಿ-ಕಹಿಗಳನು ಅನುಭವಿಸಿ ಮುನ್ನಡೆವ |
ಕಾಲಗತಿಗನುಸರಿಸಿ ಎರಿಳಿತಕೆದೆಗೊಟ್ಟು || ೩ ||

ಸತ್-ಕರ್ಮದೆರಕದಲಿ ನಮ್ಮ ಬಾಳನು ಹೊಯ್ದು |
ಮೂಜಗಕೆ ಮಾದರಿಯ ಮುದ್ರೆಯನು ಒತ್ತಿ |
ಬಾಳ-ನಾಟಕದ ಪಾತ್ರದಲಿ ಯಶ ಪಡೆದು |
ಕೊನೆಯಲ್ಲಿ ಮಾನವರು ಸಾಗಿರುವ ಪಥವಿಡಿದು |
ಸಾಗುವದೆ ಪಾವನಾ ಇದುವೆ ನಿಜ ಜೀವನಾ || ೪ ||

---

[ ತಮ್ಮ ಸಮಾಜಕ್ಕಲ್ಲದೆ ಎಲ್ಲ ಮಾನವ ಸಮಾಜಕ್ಕೂ ಅನ್ವಯಿಸುವಂತೆ ಸಂದೇಶವಿದೆ ಈ ಕವನದಲ್ಲಿ. ಬಾಳು ಹಾಳೆಂದು, ಸಂಸಾರ ಅಸಾರವೆಂದು ದೂರಿ, ಜೀವನದ ಸತ್ಯ-ಶಿವ-ಸೌಂದರ್ಯಗಳನ್ನು ಜರೆದು, ಆತ್ಮವಂಚನೆಯನ್ನು ಮಾಡಿಕೊಂಡು ಮಾನವನು ತನ್ನ ಕರ್ತವ್ಯಕ್ಕೆ ಪರಾಙ್ಮುಖನಾಗಿ ಬಾಳುವದು ಜೀವನವೇ ? ನಾವೆಲ್ಲರೂ ಒಂದಾಗಿ ಸೋಲು ಬರಲಿ, ಗೆಲವು ಬರಲಿ, ಕಹಿಸಿಹಿ ಯಾವುದೂ ಬರಲಿ, ಎಲ್ಲಕ್ಕೂ ಎದೆಗೊಟ್ಟು, ಸತ್ಕರ್ಮದಲ್ಲಿ ಬಾಳನ್ನು ಸವೆಯಿಸುತ್ತ ಬಾಳಿನ ಈ ನಾಟಕದಲ್ಲಿ ದೇವನು ದಯಪಾಲಿಸಿದ ನಮ್ಮ ಪಾತ್ರವನ್ನು ಸರಿಯಾಗಿ ನಿಷ್ಕಾಮಬುದ್ಧಿಯಿಂದ ಮಾಡಿ ಯಶಸ್ವಿಯಾಗುವುದೇ ಮಾನವಜೀವನದ ಗುರಿ, ಇದುವೆ ನಿಜಜೀವನ, ಎಂಬ ಉದಾತ್ತವಾದ ನಿಷ್ಕಾಮಕರ್ಮದ ಗೀತವನ್ನು ಕವನಕಾರರು ಈ ಕವನದಲ್ಲಿ ಹಾಡಿರುವರು. ]

---

# ಶ್ರೀ ಶಿವಲಿಂಗಸಂಗತರಂಗ

## ೨

## ಸುಜನರಿಗಾಗಿ—೧

### ವಾತ್ಸಲ್ಯದ ಪ್ರಭೆ

ನಮಿಸುವೆನು ನಿಮಗೀಗ ಓ! ತುಕೋಳ ಸಾಹೇಬನೇ |
ನನ್ನೆದೆಯಲಿಹ ನೇಹವನೆಲ್ಲ ಸುರಿದು ||
ಗಗನ ಸದೃಶ ನಿಮ್ಮ ಮಿತ್ರತೆಯ ಅಮರತೆಯು |
ಸಮತತ್ವ ಸಮರಸದ ಸೋದರತೆಯದು || ೧ ||

ಹೃದಯಾರವಿಂದವನು ವಿಕಸಿಸುತೆ ಕರುಣಿಸುತೆ |
ದಿವ್ಯತೆಯ ಜೀವನದಿ ಹರಿಯಿಸುತಲಿ ||
ಆನಂದ ರವಿತೇಜ ಹೊಮ್ಮಿಸುತ ಸ್ನೇಹಾನಂದ |
ಸುವಿಚಾರ ಸತ್ಪ್ರೇಮ ಸೂಸುತಲಿ || ೨ ||

ಅರಳಿಸುತಲಾತ್ಮವನು ಹೃದಯ ವಿದ್ವತ್ತೆಯನು |
ವಾತ್ಸಲ್ಯದೊಳು ಬೋಧಿಸಿ ಸಫಲಗೊಳಿಸುತಲಿ ||
ನಮ್ಮಿರವೆ ನೀವಾಗಿ, ನಿಮ್ಮ ಕೃತಿತೇಜ ನಾವಾಗಿ |
ಉಭಯ ರಸಮಯ ಭಾವ ಪ್ರಕಾಶಗೊಳಿಸುತಲಿ || ೩ ||

ಉನ್ಮೇಷದಲೆಗಳೊಳು ನಿಜಭಾವ ಉಮ್ಮಳಿಸಿ |
ನವ ಪ್ರತಿಭೆ ಜೀವನದೊಳುರುಳಿಸುತಲಿ ||
ಸತ್ಯ ಸೌಂದರ್ಯಗಳ ಆನಂದ ಮಿಡಿಯುತಿರಲಿ |
ಮಿತ್ರ ವಾತ್ಸಲ್ಯದ ಪ್ರಭೆಯು ಸ್ಫುರಿಸುತಿರಲಿ || ೪ ||

---

[ ಇಂದು ಮೈಸೂರು ರಾಜ್ಯದ ಹಾಯ್‌ಕೋರ್ಟ ಜಜ್ಜರಾಗಿರುವ ಶ್ರೀ ತುಕೋಳ ತಮ್ಮಣ್ಣನವರು ತಮ್ಮ ವಕೀಲಿ ವ್ಯವಸಾಯವನ್ನು ವಿಜಾಪುರದಲ್ಲಿ ಪ್ರಾರಂಭಿಸಿ ಕೆಲವು ವರ್ಷಗಳನ್ನು ಇಲ್ಲಿ ಕಳೆದರು. ಆಗ ಹಿರಿಯರಿಗೆ ತಮ್ಮಂದಿರಾಗಿ ಕಿರಿಯರಿಗೆ ಅಣ್ಣಂದಿರಾಗಿ ತಮ್ಮ ಹೆಸರನ್ನು ಸಾರ್ಥಕಗೊಳಿಸಿ ಅವರು ವಿಜಾಪುರದವರಿಗೆಲ್ಲ ಆಪ್ತಬಂಧುಗಳಂತೆ ಬೇಕಾದವರಾಗಿ

ದ್ದರು. ಆ ಅವಧಿಯಲ್ಲಿ ಅವರ ಮತ್ತು ಶ್ರೀ ಶಿವಲಿಂಗಪ್ಪ ಹೇರಲಗಿಯವರ ಪರಿಚಯವಾಗಿ ಅದು ಸ್ನೇಹದಲ್ಲಿ ಪರಿಣಮಿಸಿ ದಿನಗಳೆದಂತೆ ಗಾಢತರವಾಗಿ ಹೋದುದರಲ್ಲಿ ಆಶ್ಚರ್ಯವಿಲ್ಲ. ಶ್ರೀ ತುಕೋಳರು ತಮ್ಮ ಆಪ್ತ ಬಂಧುವೆಂದು ಮಾರ್ಗದರ್ಶಕರೆಂದು ಮುಂತಾಗಿ ಶ್ರೀ ಹೇರ-ಲಗಿಯವರು ಬಾಯಿತುಂಬ ಹೇಳಿ ಸಂತಸಪಡುತ್ತಾರೆ. ಶ್ರೀ ತುಕೋಳರ ಸರ್ವಮಾನ್ಯವಾದ ವಿದ್ವತ್ತೆ, ಹೃದಯದ ವಿಶಾಲತೆ, ಸ್ನೇಹದ ಉದಾತ್ತತೆ, ಪ್ರೇಮಳ ವ್ಯಕ್ತಿತ್ವ ಮುಂತಾದವು ಗಳಿಗಾಗಿ ಈ ಕವನವನ್ನು ಹಾಡಿ ಶ್ರೀ ಶಿವಲಿಂಗಪ್ಪನವರು ತಮ್ಮ ಒಲುಮೆಯನ್ನು ಮೆಚ್ಚಿಗೆ ಯನ್ನೂ ಉಪಕೃತಿಯ ಭಾವವನ್ನೂ ರೂಪಿಸಿದ್ದಾರೆ.

---

## ಸುಜನರಿಗಾಗಿ—೨

### ಸ್ನೇಹದ ಸಮರಸತೆ

ಅಕ್ಕರೆಯ ಜೀವನದಿ ಜ್ಯೋತಿ ಬೆಳಗುತಿಹ |
ಲಕ್ಕಪ್ಪನವರ ಪ್ರೇಮ, ಜೊತೆಗೂಡಿದ ಸ್ನೇಹ ||
ಸಕ್ಕರೆಯ ಸಿಹಿಯೊಳು ಸುಖವನೀಯುತಿಹ |
ಬಿಕ್ಕು ಹತ್ತಿದದು ಹೃದಯ ವೀಣೆಯಹುದು || ೧ ||

ತಂತಿಯಿಲ್ಲದ ವೀಣೆ ದನಿಗುಡುತಿಹುದೆಂದೆನಲು |
ನಂಬಬಲ್ಲವರೆಷ್ಟು ಮಂದಿ ಹೇಳಿ? ||
ಹೃದಯ ವೀಣೆಗೆ ತಂತಿಯಿಲ್ಲವಾದರೂ ಕೂಡ |
ಅದರ ದನಿ ಕೇಳಿಸದೆ? ಸತ್ಯ ಹೇಳಿ || ೨ ||

ಸಂಗೀತಕೋವಿದರು ಸಿಂಗರದ ವಾದ್ಯಗಳ |
ನುಡಿಸಿ ಜನಮನವನ್ನು ತಣಿಸುತಿಹರು ||
ಹೃದಯ ವೀಣೆಯ ಮಿಡಿದು ಪ್ರೇಮ ಸಂಗೀತದಲಿ |
ಜನಮನವ ರಮಿಸಿದವರೆಷ್ಟಿರುವರು? || ೩ ||

ಸಂಗೀತದಿಂಪಿಗೆ ತಲೆದೂಗಿದಾ ಜನತೆ |
ಕೆಲವೆ ನಿಮಿಷದಿ ಮರೆತು ಬಿಡಲಾರದೆ? ||
ಎದೆಯ ಗೀತದ ಸೊಗಸು ಹೃದಯದಾಳವ ಸೇರಿ |
ಅಚ್ಚನೊತ್ತಿರೆ ಅಳಿಸಿ ಹೋಗಬಹುದೆ? || ೪ ||

---

[ ಶ್ರೀ ಶಿವಲಿಂಗಪ್ಪ ಹೇರಲಗಿಯವರ ಜೀವನದಲ್ಲಿ ಶ್ರೀ ಶಿರಹಟ್ಟಿ ಲಕ್ಕಪ್ಪನವರೂ ಒಂದು ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಅವರ ಚಿರಂಜೀವರ ಶಿಕ್ಷಕನೆಂದು ಮತ್ತು ಮುಂದೆ ಹಲಕೆಲವು ವೈಯುಕ್ತಿಕ ಮತ್ತು ವ್ಯಾವಹಾರಿಕ ವಿಷಯಗಳಲ್ಲಿ ಮತ್ತು ಸಂದರ್ಭ-ಗಳಲ್ಲಿ ಆಪ್ತಮಿತ್ರರೆಂದು ನಡೆದುಕೊಂಡ ಶ್ರೀ ಲಕ್ಕಪ್ಪನವರನ್ನು ಕುರಿತು ಶ್ರೀ ಶಿವಲಿಂಗಪ್ಪ-ನವರ ಹೃದಯದಲ್ಲಿಯ ಸ್ನೇಹ, ಆದರ ಮತ್ತು ಆತ್ಮೀಯತೆ ಈ ಚಿಕ್ಕ ಕವನದಲ್ಲಿರೂಪ-ಗೊಂಡಿವೆ. ]

---

## ಸುಜನರಿಗಾಗಿ—೩

### ಆದಿಗುರುವಿಗೆ

ಹೊಸ ಬೆಳಕನೆದುರಿಟ್ಟ ಬದುಕಿನಾಧಾರಿಗಳೇ |
ಲೇಸ ಅಗಜಣ್ಣಾ ನಾ ನಿಮ್ಮ ಮರೆಯಲಾರೆ ||
ಆವ ಸುಖಸ್ವಪ್ನಸಾಗರದಲ್ಲಿ ತೇಲಿದರು |
ಆದಿಗುರು ನಿಮ್ಮ ಪ್ರೇಮವನೆಂದಿಗು ತೊರೆಯಲಾರೆ ||೧||

ನಿಮ್ಮೊಳೊಂದಾಗಿದ್ದ ನಿಮ್ಮಡಿ ಒಡನಾಡಿದ |
ಎನ್ನೊಳು ಹಿತಬಯಸಿ ಎನಗೆ ಸುಖ ನೀಡಿದ ||
ಬನ್ನಿ ಓ ! ಬಂಧುರ ಬಂಧುಗಳೆ ! ನಾ ನಿಮ್ಮವನೆಂದು |
ಬೆನ್ನು ಬಾಹುಗಳಾಗಿ ಉಚ್ಚ ಬಲಕೊಡುವಿರೆಂದು ||೨||

ನೂಂದು ಬಿಸುಸುಯ್ಯುತಿರಲೆತ್ತಿ ಮೈದಡವಿದಿರಿ |
ಹಿಂದುಳಿಯುತ್ತಿರೆ ಕೈ ಹಿಡಿದು ಎನ್ನ ನಡೆಸಿದಿರಿ ||
ಇಂದೇಕೆ ಈ ಮೌನ ? ಆರ ಕುರಿತೀಧ್ಯಾನ |
ಚೆಂದಾಗಿ ಕೇಳುತಿಹೆ ಇಂದು ನಿಮ್ಮಿರವನು ||೩||

ಭ್ರಾತೃಭಾವ ಭರವಸದಿ ಬರೆದಿಹ ಹುಂಡಿಯ |
ಕ್ಷಿಪ್ರದಲಿ ಸ್ವೀಕರಿಸಿದ ಸವಿಸುಖದುನ್ನತಿಯ ||
ಪತ್ರಗಳ ಉತ್ತರದ ಆದರದ ಬೆಂಬಲ |
ಪುತ್ರವಾತ್ಸಲ್ಯದಿಂ ಪತ್ರದಿಂ ತೃಪ್ತಿಸುವಿರಲ್ಲವೆ ||೪||

ಬಗೆಬಗೆಯ ಎಡರುತೊಡರುಗಳಿದ್ದರೂ |
ಜಗದೊಡೆಯ ಜಡೆಯ ಶಂಕರಲಿಂಗ ದೇವನೇ ||

ಭವಪಾಶವನು ಹರಿಸಿ ಜೀವ ಶಾಂತಗೊಳಿಸಿ |
ಭುವಿಯೊಳು ಉದ್ಧರಿಸೆನ್ನ ಸ್ಥಿರ ಚಿತ್ತಗೊಳಿಸಿ || ೪ ||

---

[ ತಂದೆ ತೀರಿಕೊಂಡಾಗ ಎಳೆ ವಯಸ್ಸಿನ ಶ್ರೀ ಶಿವಲಿಂಗಪ್ಪನವರ ಆಸ್ತಿ ಪಾಸ್ತಿ ಕೋರ್ಟಿನ ನಾರ್ಝುರರ ಕೈಗೆ ಸೇರಿಸಲಾಯಿತು. ಅವರು ವಯಸ್ಸಿಗೆ ಬರುತ್ತಲೆ ಅವರ ಆಸ್ತಿ ಅವರ ಕೈಗೆ ಬಂದಿತು. ಆಗ ಕೇವಲ ಐದು ಸಾವಿರ ರೂಪಾಯಿಗಳ ಬಂಡವಾಳದಿಂದ ೧೯೧೨ನೆಯ ಇಸವಿಯಲ್ಲಿ ಸ್ಥಾಪಿತವಾದ ಎಸ್. ಎಸ್. ಹೆರಲಗಿ ಜವಳಿ ಅಂಗಡಿ ಇಂದಿಗೆ ವಾಣಿಜ್ಯ ಕ್ಷೇತ್ರದಲ್ಲಿ ಪ್ರಖ್ಯಾತಿಯನ್ನು ಪಡೆದು ಮೊನ್ನೆ ಮೊನ್ನೆ ಐವತ್ತನೆಯ ವರ್ಷಗಳಿಂದ ವಿಜೃಂಭಣೆಯಿಂದ ನಡೆದ ವ್ಯವಹಾರದ ಸುವರ್ಣಮಹೋತ್ಸವವು ಜರುಗಿತು. ಹೊಸದಾಗಿ ಅಂಗಡಿಯನ್ನು ಪ್ರಾರಂಭಿಸಿದಾಗ ಹಿರಿಯರೂ ಅನುಭವಿಕರೂ ಆದ ಶ್ರೀ ಕಮತಗಿ ಅಜಗಣಪ್ಪನವರು ಶ್ರೀ ಶಿವಲಿಂಗಪ್ಪನವರಿಗೆ ವಾಣಿಜ್ಯ ವಿದ್ಯೆಯಲ್ಲಿ ಆದಿಗುರುಗಳಾದರು. ಹಿರಿಯ ಆಪ್ತ, ಮಿತ್ರ, ಬಂಧು ಮತ್ತು ಆದಿಗುರುಗಳಾದ ಶ್ರೀ ಅಜಗಣಪ್ಪನವರ ಸ್ಮೃತಿಗೆ ತಮ್ಮ ಪ್ರೀತಿ ಭಕ್ತಿ ಮತ್ತು ಉಪಕೃತಿಯ ಭಾವನೆಗಳನ್ನು ಈ ಕವನದಲ್ಲಿ ರೂಪಿಸಿ, ಶ್ರೀ ಶಿವಲಿಂಗಪ್ಪನವರು ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ.]

---

## ಸುಜನರಿಗಾಗಿ—೪

### ಮನೋರೋಗ ಪರಿಹಾರಕರಿಗೆ

ಮಿದುಳಿನಾರೋಗ್ಯದ ಮಹಾ ಮೇಧಾವಿಗಳಾಗಿ |
ಮಾನಸಶಾಸ್ತ್ರದಿ ಪರರಾಷ್ಟ್ರದೊಳ್ ಪಾರಂಗತರಾಗಿ ||
ಜನಮನದ ದುರ್ಬಲತೆ ಪರಿಹರಿಸುವವರಾಗಿ |
ಜನಾದರವನು ಆಕರ್ಷಿಪ ಹೃತ್ಕಮಲವುಳ್ಳವರಾಗಿ || ೧ ||

ಪ್ರಶಾಂತ ಮಹೋದಯ ಕರುಣೆಯು ತುಂಬಿದೆ |
ಗುರು ಶಾಂತಪ್ಪನವರ ಅನುಭವದ ಸುಧೆಯಿಂದೆ |
ಸ್ಥಿರ ಶಾಂತಿಯುತ ಜ್ಞಾನಾನಂದನಿದ್ರೆ ಬರುತಿದೆ |
ಚಿರ ಶಾಂತತೆಯು ಹೃದಯವೀಣೆ ಮೀಟುತಿದೆ || ೨ ||

ಶ್ರೀ ಶಿವದಾಸಮಯ್ಯ ಸಂಪ್ರದಾಯದಾ ಶಿವಜ್ಯೋತಿ |
ಶ್ರೇಯದಲಿ ಜನಮನದ ರಮಿಸುತಿಹ ಸತ್ಯಪ್ರೀತಿ |
ಶ್ರೇಷ್ಠ ಸ್ವತಂತ್ರ ಭಾರತದ ಜನಸೇವೆ ಸಲ್ಲಿಸುವ ರೀತಿ |
ಶ್ರೀ ಚಿತ್ರಕಲ್ಲದುರ್ಗದ ಜಗದ್ಗುರುಗಳ ಚರಣದ ಭಕುತಿ || ೩ ||

"ಸತಿಧರ್ಮ"ವನರಿತು ಪತಿಸೇವೆಯನು ಗೈಯುತಿಹ |
ಶಾಂತಾದೇವಿಯು ದಾಂಪತ್ಯದಿಂ ಶೋಭಿಸುತಿಹ |
ಸುತರರ ಸೌಖ್ಯದಲಿ ಹಿತಮಿತವನರಿತ ಡಾಕ್ಟರರು |
ಸುಪ್ರೇಮದಿಂ ಸಕಲ ಸಂಪದಗಳಿಂ ಬೆಳಗುತಿಹರು || ೪ ||

---

[ ಸಂಸಾರದ ಆಧಿವ್ಯಾಧಿಗಳಿಂದ ಒಮ್ಮೆ ಶ್ರೀ ಶಿವಲಿಂಗಪ್ಪನವರಿಗೆ ಮಾನಸಿಕ ಅಸ್ವಾಸ್ಥ್ಯ ವಾಗಿದ್ದಿತು. ಆಗ ಬೆಂಗಳೂರಿಗೆ ಹೋಗಿ ಅಲ್ಲಿಯ ( Mental Hospital ) ಮಾನಸಿಕ ಚಿಕಿತ್ಸಾಲಯಕ್ಕೆ ಹೋಗಿ ಅದರ ಮುಖ್ಯಾಧಿಕಾರಿಗಳಾದ ಡಾಕ್ಟರ ಗುರುಶಾಂತಪ್ಪನವರಲ್ಲಿ ಔಷಧೋಪಚಾರವನ್ನು ಮತ್ತು ಮಾನಸೋಪಚಾರವನ್ನು ಪಡೆದು ಶ್ರೀ ಶಿವಲಿಂಗಪ್ಪನವರು ಸಂಪೂರ್ಣವಾಗಿ ಗುಣಹೊಂದಿದರು. ಅವರ ಉಪಚಾರದಿಂದ ತಮ್ಮ 'ಮನದ ದುರ್ಬಲತೆ' ಪರಿಹಾರವಾಗಿ 'ಸ್ಥಿರ ಶಾಂತಿಯುತ ಜ್ಞಾನಾನಂದ ನಿದ್ರೆ ಬರುತಿದೆ' ಎಂದು ಮತ್ತು "ಚಿರ ಶಾಂತತೆಯ ಹೃದಯವೀಣೆ ಮೀಟುತಿದೆ" ಎಂದು ಅನುಭವ ಪಡೆದು ಪ್ರೀತರಾದ ಮತ್ತು ಉಪಕೃತರಾದ ಶ್ರೀ ಶಿವಲಿಂಗಪ್ಪನವರು ಈ ಕವನದ ಮೂಲಕ ಅವರಿಗೆ ತಮ್ಮ ಪ್ರೀತ್ಯಾದರ-ಗಳ ಕಾಣಿಕೆಯನ್ನು ಸಲಿಸಿರುವರು. ]

---

## ಸುಜನರಿಗಾಗಿ—೫

### ಶುಭೇಚ್ಛಾ ಸಂದರ್ಶನ

ಸರ್ವಲೋಕ ಜನಹಿತೈಷಿ "ಉದಕಮಂಡಲ" ವೀರಶೈವಾಶ್ರಮ ||
ಕಾರ್ಯಾರ್ಥ ಸ್ಥಾಪನಾರ್ಯ ನಮಸ್ತೆ | ಕಾತೇರಿ ಶ್ರೀ ಸಿದ್ಧಲಿಂಗ ಶಿವಾಚಾರ್ಯ ||೧||

ಬಾಹ್ಯ ಸಂಸಾರದೊಳಲೆದು | ದಣಿದ ಮಾನವರಿಲ್ಲ ||
ನಮ್ಮ ಚೈತನ್ಯಮಯವಿದು | ತುಂಬಿ ತುಳುಕುತಿರಲಿ || ೨ ||

ದಿವ್ಯಾಶ್ರಮದಿ ಶ್ರೀಗುರು | ಸಾನ್ನಿಧ್ಯದೊಳುಂ ಶಾಂತಿಯುಲಿ |
ಭವ್ಯ ವಿಕಾಸದಿ ತ್ರಿಕಾಲ | ಸುಪ್ರಭಾತ ಕಾಣುತಿರಲಿ || ೩ ||

---

[ ಮನಶ್ಶಾಂತಿಗಾಗಿ ದೇಶಸಂಚಾರಕ್ಕೆಂದು ರಸಯಾತ್ರೆಗೆಂದು ಹೊರಹೊರಟಾಗ ಶ್ರೀ. ಶಿವಲಿಂಗಪ್ಪನವರು ಒಮ್ಮೆ ಉದಕಮಂಡಲ (Ootachmond) ದಲ್ಲಿ ಕೆಲ ದಿನ ಕಳೆದರು. ಅಲ್ಲಿ "ವೀರಶೈವಾಶ್ರಮ"ದ ಸ್ಥಾಪಕ ಸಂಚಾಲಕರಾದ ಶ್ರೀ ಸಿದ್ಧಲಿಂಗ ಶಿವಾಚಾರ್ಯರ ಸತ್ಸಂಗದಲ್ಲಿ ತಮ್ಮ ಆತ್ಮಕ್ಕೆ ಸಿಕ್ಕ ಶಾಂತಿಯ ಸ್ಮರಣೆಗಾಗಿ ಈ ಕವನವನ್ನು ಕಟ್ಟಿ ಶ್ರೀ ಸಿದ್ಧ-

ಲಿಂಗ ಶಿವಾಚಾರ್ಯರ ವಿಷಯದಲ್ಲಿ ಶ್ರೀ ಶಿವಲಿಂಗಪ್ಪನವರು ತಮ್ಮ ಪ್ರೀತಿಭಕ್ತಿಗಳ ಕಾಣಿಕೆ ಯನ್ನು ಅರ್ಪಿಸಿರುವರು.

---

## ಸುಜನರಿಗಾಗಿ—೬



೧. ಬೆಳ್ಳಿಯ ಬಸವಣ್ಣ— ಶ್ರೀ. ಶಿವಲಿಂಗಪ್ಪನವರು ಮಾಡಿಸಿದುದು
೨. ಬಬಲೇಶ್ವರದ ಶ್ರೀ ಶಾಂತವೀರ ಮಹಾಸ್ವಾಮಿಗಳವರು
೩. ಶ್ರೀ ಶ್ರೀ ಬಂಥನಾಳ ಮಹಾಶಿವಯೋಗಿಗಳವರು
೪. ಶ್ರೀ ಗೀತಾಚಾರ್ಯ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು

### ಸ್ವಾಮಿಗಳ ಅಡಿದಾವರೆಯಲ್ಲಿ

ಬಗೆಯಲಿದೋ ನಿರ್ಮಲತೆಯು ಬಲು ಹಿರಿದು ವಿಶ್ವದಲಿ |
ಅದರೊಡನೆ ಬೆರೆತಿರಲು ಎದೆಯೊಲವು ಸಮತೆಯಲಿ ||
ಇದಕೆಳಸಿ ಸುಳಿಯುತಿದೆ ಭಾವನೆಯ ರಸದುಂಬಿ |
ಎನಿತೊಂದು ಸತ್ಯತೆಯು "ಶಾಂತೇಶ" ಜಗದಲ್ಲಿ! ||೧||

---

[ ಬಬಲೇಶ್ವರದ ಶ್ರೀ ಶಾಂತವೀರ ಸ್ವಾಮಿಗಳ ನಿರ್ಮಲತೆ, ಸಮತೆ, ಸತ್ಯತೆ, ಮತ್ತು ಆಧ್ಯಾತ್ಮಿಕ ಉನ್ನತತೆ ಇವುಗಳಿಗೆ ಶ್ರೀ ಶಿವಲಿಂಗಪ್ಪನವರು ಸಲ್ಲಿಸಿದ ಭಕ್ತಿಯ ಕಾಣಿಕೆ ಈ ಕವನ. ]

---

# ಸುಜನರಿಗಾಗಿ—೭

## ಶಿವಜೀವ ಸಾಮರಸ್ಯದರ್ಶನ

(ಬಿಲ್ವದಳ-ಪಾದಾರ್ಪಣ)

ಭಾವದೊಳು ಕರುಣೆಯು ಅಂಕುರಿಸು ಜೀವಾತ್ಮನೆ |
ಶಿವಭಾವಶೀಲದ ಸೆಲೆ ಸ್ಫುರಿಸು ಸತ್ಯಾತ್ಮನೆ ||
ನೆನಹಿನ ಮಾಲೆಯನಿರಿಸು ಹೃದಯಮಂಜೂಷೆಯಲಿ |
ಧನ್ಯತೆಯ ಸುಮನವನು ಹರುಷದಿಂ ಅರ್ಪಿಸಿಲ್ಲಿ || ೧ ||

ಘಂಟೆಗಳ ಘೋಷವಿಲ್ಲ ಜಾಗಟೆಗಳ ಜಂಜಟವಿಲ್ಲ |
ಕರ್ಪೂರದಾರುತಿಯು ಸೊಡರು ತಾನಿಲ್ಲ ||
ಪರಶಿವನ ಆನಂದ ರೂಪಗೊಂಡಿಹುದಿಲ್ಲಿ |
ಜಗದಾತ್ಮನ ರಸಿಕತೆ ಕಡಲುಕ್ಕಿ ಹರಿಯುವುದಿಲ್ಲಿ. || ೨ ||

ಸರಸದಿಂ ಪ್ರತಿಪಾದಿಸುವ ಈ ಪ್ರವಚನವು |
ವೀರಮಹೇಶ್ವರ ತೆಲಸಂಗೇಶ ಬೋಧಾಮೃತವು ||
ವರವಿಜಯಪುರ ಸುಜನರ ಜ್ಞಾನಾನಂದವು |
ಸರಸದಿಂದುದಯಿಸುತಿದೆ ಸಲೆ ಭಕ್ತಿಭಾವವು || ೩ ||

---

[ತೆಲಸಂಗದ ಶ್ರೀ. ವೀರಮಹೇಶ್ವರ ಸ್ವಾಮಿಗಳು ವಿಜಾಪುರದಲ್ಲಿ ಶ್ರಾವಣಮಾಸದಲ್ಲಿ ಮಾಡಿದ ಪ್ರವಚನಗಳಿಂದ ಭಕ್ತಿ-ಜ್ಞಾನಗಳ ಆನಂದವನ್ನು ಸವಿದು ಸಂತೃಪ್ತರಾದ ಶ್ರೀ ಶಿವಲಿಂಗಪ್ಪನವರ ಹೃದಯದಿಂದ ಹೊರಹೊಮ್ಮಿದ ಕವನವಿದು.]

---



ಧ್ಯಾನಯೋಗಸಮಾಧಿಯಲ್ಲಿ ಲೀನರಾದ ಶಿವಯೋಗಿಯುವರು

## ಸುಜನರಿಗಾಗಿ—೮

### ಶ್ರೀ ಶಿವಯೋಗಿ ಶ್ರೀ ನಂಜುಂಡಾರ್ಯರಿಗೆ

ಬುದ್ಧಿರ್ವೈ ಕುಂಠಿತಾ ನಾಥ ಸಮಾಪ್ತಾ ಮಮ ಯುಕ್ತಯಃ |
ನಾನ್ಯಂ ಕಿಂಚಿದ್ವಿಜಾನಾಮಿ ತ್ವಮೇವ ಶರಣಂ ಮಮ ||

ಮಹಾಯೋಗೀಶ್ವರ ಗುರುಮಹೇಶ್ವರರು ಮೈಸೂರಿನವರು
ಮೃದು ಮುಪ್ಪಿನ ದೇಹದ ಬೆಳ್ಳಿಗೂದಲ ಜಡೆಯುವರು.

ಮುಖ ನಿಡಿಧಾದ ಗಂಭೀರ ಮುದ್ರೆಯ ತಪಸ್ವಿಗಳಿವರು
ನೇತ್ರ ತೇಜಃಪುಂಜಕಾಂತಿಯಿಂ ದೊಪ್ಪುವ ಶ್ರೀ ನಂಜುಂಡಾರ್ಯರು.

ಸ್ತೋತ್ರಶಿವಧ್ಯಾನ ನಿತ್ಯ ನಿರತರಾಗಿ ಕಾಶಿವಾಸದಲ್ಲಿಹರು
ಕ್ಷೇತ್ರದಲ್ಲಿ ಯಾತ್ರಿಕರ ಮನವನರಳಿಸುತ್ತೆ ಬೋಧಿಸುತಿಹರು.

ಕಿಲುಬು ಜಾರಿದರೆ ಕನ್ನಡಿ ನಿಚ್ಚಳವಾಗಿ ಕಾಣುವ ತೆರದಿ
ನಿರ್ಮಲಾತ್ಮರು ಯೋಗಾನಂದದಲಿ ಲೀನರಾಗಿಹರು.
ಶಿವಯೋಗಸಾಧನೆಯ ಆತ್ಮಜ್ಯೋತಿಗಳಿವರು.

———

[ಮೇಲ್ಕಾಣಿಸಿದ ಚಿತ್ರದಲ್ಲಿ ನಟ್ಟನಡುವೆ ಖುರ್ಚಿಯಲ್ಲಿ ಕುಳಿತುಕೊಂಡ ಶಿವಯೋಗಿಗಳನ್ನು, ಧ್ಯಾನಯೋಗಸಮಾಧಿಯಲ್ಲಿ ಲೀನರಾದ ಅವರ ಆಸನವನ್ನು ಮತ್ತು ಮುಖಮುದ್ರೆಯನ್ನು ನೋಡಿದರೆ ನಮ್ಮ ಮನಸ್ಸು, ಹೃದಯ ಮತ್ತು ಪ್ರಾಣಗಳೆಲ್ಲ ಗುರುಲಿಂಗದಲ್ಲಿ ಭಕ್ತಿ-ಸಂಗಿಯಾಗಿ ಮೈಮರೆತು ಹೋಗುತ್ತವೆ.]

———

# ಶ್ರೀಶಿವಲಿಂಗಸಂಗತರಂಗ

## ೩

## ನನ್ನವರಿಗಾಗಿ—೧

### ಹುಟ್ಟಿದ । ಸುಕುಮಾರ ಹುಟ್ಟಿದನು ।

ಮಾತೆ ಶಿವಗಂಗೆಯ ಗರ್ಭದಿ ಜನಿಸಿ ಪುತ್ರರತ್ನ ಪ್ರಕಾಶಿಸುತ |
ಮಮತೆಯ ಹಿರಿ ಹೊಂಬೆಳಗನು ಪ್ರೇಮದಿಂ ಬೆಳಗುತ |
ಪರಶಿವ ಶಂಕರಲಿಂಗನ ಪ್ರೇರಣೆಯಿಂ ಉದಯಿಸುತ |
ವಿಜಯಪುರದ ಸುಖಸದನದೊಳು ಶಿಶು ಪ್ರಕಾಶಿಸುತ ||
....ಹುಟ್ಟಿದ ಸುಕುಮಾರ ಹುಟ್ಟಿದನು... || ೧ ||

ಚೆಲುವಿನ ಕಂಗಳ ಹೊಳವನು ಹರವುತ |
ನಲುವಿನ ಕೈಗಳ ಮೇಲಕೆ ನೀಡುತ ।
ಒಲುಮೆಯ ಹೆಚ್ಚಿಸಿ ಮೆಚ್ಚಿಸಿ ಮೆರೆವುತ |
ನಲಿವನು ಶಿಶು "ಗುರುಪ್ರಕಾಶ" ಬೀರುತ ।
... ಉದಯಿಸಿದ ಶಿಶು ಚಂದ್ರನುದಯಿಸಿದನು || ೨ ||

ಓಂ ಶಿವಃ ಸ್ವರ ನುಡಿಯಲಿ ದೇವರಾಗವ ಮಾಡುತ |
ಜೊಲ್ಲೊಳು ಜೀವನದಮೃತವ ಸಾನುರಾಗದಿ ಸುರಿಸುತ |
ಮುಖ ಕಳೆಯೊಳು ಮಿಗಿಲಾನಂದ ಚೆಲುವಾಗೆ ಸೂಸುತ |
ಮುದದಿ ಮನದೊಳು ಮೋಹದಿ ಆಲ್ಹಾದಗೊಳಿಸುತ
... ಬೆಳಗುವ ಸುಪುತ್ರ ಬೆಳಗುವನು... || ೩ ||

ಮಕರ ಸಂಕ್ರಮಣದ ಶುಭ ಸೀಮೆಯ ದಿನದಲಿ |
ಮುಕ್ಕಣ್ಣ ಶಿವ ಜಡೆಯ ಶಂಕರಲಿಂಗನ ಘನ ಕೃಪೆಯಲಿ ||
ಮಮತೆಯ ಪ್ರೇಮ, ಪ್ರೇರಣೆಯುಕ್ಕಂದಿತ ಬಳಗದಲಿ |
ಮೃದು ಮಧುರ ಮನೋಹರ (ಗುರುಪ್ರಕಾಶ) ನಾಮದಲಿ
... ಬಾಲಲೀಲೆಯೊಳು ಶಿಶು ತಾ ಹೊಳೆಯುವನು || ೪ ||

ಸೋದರಮಾವ ಶಿವಯೋಗಿಯ ಸೊಬಗಿನ ಮನೆಯೊಳು |
ಸೋದರ ಅತ್ತೆ ಕರುಣಾದೇವಿಯ ರನ್ನದ ಕನ್ನಡಿ ತೊಟ್ಟಿಲೊಳು |

ಸಕಲರ ಇಷ್ಟಾರ್ಥ ಸಾರ್ಥಕ ಸುಖ ಸಾಗರದೊಳು |
....ಹರ್ಷದಿಂ "ಗುರುಪ್ರಕಾಶ" ಜೋಗುಳ ಹಾಡಿದರು || ೫ ||

---

[ಸೌ॥ ಶಿವಗಂಗಮ್ಮ ಶ್ರೀ. ಶಿವಲಿಂಗಪ್ಪನವರ ಹೆಣ್ಣು ಮಕ್ಕಳಲ್ಲಿ ಒಬ್ಬರು. ಇವರ ಹೊಟ್ಟೆಯಲ್ಲಿ ಗಂಡುಮಗು ಹುಟ್ಟಿದಾಗ ಶ್ರೀ. ಶಿವಲಿಂಗಪ್ಪನವರು ಹಾಸಿನಿಂದ ಮತ್ತು ನಲ್ಮೆಯ ಹುಮ್ಮಸ್ಸಿನಿಂದ ಕಟ್ಟಿದ ಹಾಡು ಈ ಕವನ. ಮಗುವಿಗೆ ಶ್ರೀ ಶಿವಯೋಗಿ ಸೋದರಮಾವಂದಿರು, ಶ್ರೀಮತಿ ಕರುಣಾದೇವಿ ಸೋದರತ್ತೆ, ಪ್ರೇಮಾ-ಪ್ರೇರಣಾ ಇವರು ಅಕ್ಕಂದಿರು, ಶ್ರೀಮತಿ ರಾಚಕ್ಕ ಚಿಕ್ಕವ್ವ ಈ ರೀತಿ ಒಲವಿನಿಂದ ತುಂಬಿದ ಮನೆಯಲ್ಲಿ ಮನೆಗೆ ಮನಕ್ಕೆ ಬೆಳಕಾಗಿ, ಹೃದಯಕ್ಕೆ ಹರುಷವಾಗಿ ಹುಟ್ಟಿದ ಮಗುವನ್ನು ಮೊಮ್ಮಗನನ್ನು ಕಂಡು ನಲಿದು ಹಾಡಿದ ಶ್ರೀ ಶಿವಲಿಂಗಪ್ಪನವರನ್ನು ಕಂಡರೆ 'ಧನ್ಯೋ ಗೃಹಸ್ಥಾಶ್ರಮಃ!' ಎಂದೆನ್ನುವಂತಾಗುತ್ತದೆ.]

---

## ನನ್ನವರಿಗಾಗಿ—೨

### ತೂಗಿರೆ ಭದ್ರನ ತೂಗಿರೆ ರುದ್ರನ

ತೂಗಿರೆ ಭದ್ರನ ತೂಗಿರೆ ರುದ್ರನ ತೂಗಿರೆ ಕರುಣಾ ಸಮುದ್ರನ....
ನೀವು ತೂಗಿರೆ || ಪಲ್ಲ ||

ತೂಗಿರೆ ಕರುಣಾ ಸಮುದ್ರನ | ಜಗದೊಡೆಯ | ಜಡೆಯ ಶಂಕರಲಿಂಗ ದೇವನ |
| ತೂಗಿರೆ ನೀವು ತೂಗಿರೆ || ಅನುಪಲ್ಲ ||

ಆ ಶಂಕರ ದಾಸಿಮಯ್ಯ ತಾ ನವಲಿಯೊಳು |
ಶ್ರೀ ಜಡೆಯ ಶಂಕರ ದೇವಾಲಯದೀ ।

ಯೋಗದಿಂ ದೇವನ ನೆನೆದು ಧ್ಯಾನಿಸಲು |
ಲಿಂಗದಿಂದುದ್ಭವಿಸಿ ತೋರ್ದನ | ತೂಗಿರೆ ನೀವು ತೂಗಿರೆ || ೧ ||

ತೂಗಿರೆ ಭದ್ರನ ತೂಗಿರೆ ರುದ್ರನ ತೂಗಿರೆ ಕರುಣಾ ಸಮುದ್ರನ || ನೀವು ತೂಗಿರೆ-
ತೂಗಿರೆ ನೀವು ತೂಗಿರೆ |
ಶಿರದೊಳು ಶಿವಲಿಂಗ ಕೊರಳೊಳು ರುಧ್ರಾಕ್ಷ | ಫಣಿಯಲಿ ಶೋಭಿಪ ತ್ರಿಪುಂಡವು |
ಪಠಿಸುತ ಶಿವಮಂತ್ರ, ಸರಿಸುತ ಜಪಮಾಲೆ | ಝುಗಿ ಝುಗಿಸುತ ಬಂದ |
ಶಂಕರ ದಾಸಿಮಯ್ಯನ || ನೀವು ತೂಗಿರೆ
ಮಾನಿನಿ ಮಣಿಯರೆ, ಫಾಲಾಕ್ಷ ಧರನಿಗೆ | ಮಹಿಮಾ ತೋರಿದ ಮಹಾತ್ಮಗೆ

ಬಾಗಿ ಬಾಗಿಣ ನೀಡಿ ಭಾಮೆರೆಲ್ಲರು ಕೂಡಿ | ಭವನಾಶಗೈಯುವ ವೀರಭದ್ರನ
ನೀವು ತೂಗಿರೆ ನೀವು ತೂಗಿರೆ || ॥ ೨ ॥

---

[ ಸೌ॥ ಶಿವಗಂಗಮ್ಮನವರ ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗೆ " ಗುರುಪ್ರಕಾಶ " ಎಂದು ಹೆಸರನ್ನಿಡುವ ಸಂದರ್ಭದಲ್ಲಿ ಈ ಜೋಗುಳ ಹಾಡನ್ನು ಕಟ್ಟಿ ಶ್ರೀ ಶಿವಲಿಂಗಪ್ಪನವರು ತಾವು ಮತ್ತು ಕುಟುಂಬದವರೆಲ್ಲರೂ ಹರುಷದೊಳೋಲಾಡುವಂತೆ ಮಾಡಿದರು, "ಸ್ವಜನರಿಗಾಗಿ" ಎಂಬ ಕವನ ಮಾಲಿಕೆಯಲ್ಲಿ ಮೊದಲನೆಯ ಕವನದಲ್ಲಿ ಭಗವಂತನನ್ನೇ ಶಿಶುವಾಗಿಸಿ ವಾತ್ಸಲ್ಯ ಭಾವದ ಭಕ್ತಿಯಿಂದ ಜೋಗುಳ ಹಾಡಿದರೆ, ಈ ಕವನದಲ್ಲಿ ಶಿಶುವನ್ನೇ ಭಗವಂತನನ್ನಾಗಿಸಿ ಜೋಗುಳವನ್ನು ಹಾಡಿ ಭಕ್ತಿ ವಾತ್ಸಲ್ಯಭಾವದಲ್ಲಿ ನಲಿದಿದೆ. ]

---

# ನನ್ನವರಿಗಾಗಿ—೩

## ಬೆಳಗಿ ಬಾಳಲಿ ಗುರುಪ್ರಕಾಶ

ಶಿವನ ಪ್ರೇರಣೆ ಮೊದಲು ಗುರುಕರುಣೆ (ಗುರುಪ್ರಕಾಶ) ಯಾ ಮೇಲೆ |
... ಅದರಿಂದಲೇ ಮುಕ್ತಿಕ್ರಮವು ತಿಳಿಯೇ... ||

ಅಂತೆ ಪ್ರೇರಣೆಯಾಗಿ "ಗುರುಪ್ರಕಾಶ" ದೊರೆತಿಹುದು |
... ಇದರಿಂದಲೇ ಮುಂದೆ ಬಾಳ "ಮುಕ್ತಿ" ತಿಳಿಯೇ ||

ಪ್ರತಿಪದೆಯಃ ಚಂದ್ರನೊಲು ದಿನ ದಿನಂ ಬೆಳೆಯುತ್ತ |
... ಬಳಗದ.... ನಲಿವುಕ್ಕಿ ಬರೆ ಲೀಲೆಗಳ ತೋರುತ್ತ

ಸೌಂದರ್ಯ. ಸೌಶೀಲ್ಯ ಕಳೆಗಳನೊಳಕೊಳ್ಳುತ್ತ |
ಬೆಳಗಿ ಬಾಳಲಿ "ಗುರುಪ್ರಕಾಶ" ದಿಗದಿಗಂತಗಳತ್ತತ್ತ ॥ ೧ ॥

ಅರಿದರಗ್ರಣಿಯಾಗು ಶಿವನ ಸುತನಂತೆ |
ಭಕ್ತಶಿರೋಮಣಿಯಾಗು ಬಸವಣ್ಣನಂತೆ |

ಯಶವಾಂತು ಮೆರೆ ಮುಂದೆ ಧ್ರುವ ಕುಮಾರನಂತೆ |
ಓ ಚಿಣ್ಣ | ಬಾಳು ಚಿರಂ ಮನಸೆಳೆಯುತೆ ಮುತ್ತಿನಂತೆ ॥ ೨ ॥

---

[ ಸೌ॥ ಶಿವಗಂಗಮ್ಮನವರ ಹೊಟ್ಟೆಯಲ್ಲಿ ಮೊದಲು ಹುಟ್ಟಿದ 'ಪ್ರೇರಣೆ'ಯೆಂಬ ಹೆಸರಿನ ಹೆಣ್ಣುಮಗುವಿನ ನಂತರ " ಗುರುಪ್ರಕಾಶ " ಹುಟ್ಟಿದನು. 'ಶಿವನ ಪ್ರೇರಣೆ ಮೊದಲು ಗುರು ಕರುಣೆ ( ಗುರುಪ್ರಕಾಶ) ಆ ಮೇಲೆ' ಎಂದು ಮಾಡಿದ ಶಬ್ದಗಳ ಜೋಡಣೆಯಲ್ಲಿ ಶ್ರೀ ಶಿವ-

ಲಿಂಗಪ್ಪನವರ ಆಧ್ಯಾತ್ಮ ಭಾವವು ಮತ್ತು ಕುಟುಂಬ ವಾತ್ಸಲ್ಯವು ಈ ಕವನದಲ್ಲಿ ಹಾಸು ಹೊಕ್ಕಾಗಿ ಸಲಿಯುತ್ತಿವೆ. ಬಿದಿಗೆಯ ಚಂದ್ರನಂತೆ ಬೆಳೆದು ಬೆಳಗುತ್ತಿರುವ ಗುರುಪ್ರಕಾಶನನ್ನು 'ಅರಿದರಗ್ರಣಿಯಾಗು, ಭಕ್ತಶಿರೋಮಣಿಯಾಗು, ಮುತ್ತಿನಂತೆ ಮನಸೆಳೆಯುತ ಬಾಳು' ಎಂದು ಹಲವಾರು ಬಗೆಯಿಂದ ಹಾಡಿ ಹರಸಿ ಹರುಷಪಟ್ಟಿರುವವರು ಶ್ರೀ. ಶಿವಲಿಂಗಪ್ಪನವರು.]

---

## ನನ್ನವರಿಗಾಗಿ—೪

### ಹಾಲ ಹೊಯ್ಯುವಾ ಬನ್ನಿರೆ

ಹಾಲ ಹೊಯ್ಯುವಾ ಬನ್ನಿರೆ | ನಾಗೇಶಗೆ ಹಾಲು ಹೊಯ್ಯುವ ಬನ್ನಿರೆ || ಪಲ್ಲ ||
ಹಾಲ ಹೊಯ್ಯುವಾ ಬನ್ನಿ | ಬಾಲೆರೆಲ್ಲರು ಕೂಡಿ |
ಶೀಲ ಶೃಂಗಾರದಿಂದ | ಹಂಗ ಸೂಲ್ಹಾಕುತ ಈಗ ||
ಹಾಲ ಹೊಯ್ಯುವಾ ಬನ್ನಿರೆ | ನಾಗೇಶಗೆ ಹಾಲ ಹೊಯ್ಯುವಾ ಬನ್ನಿರೆ || ೧ ||

ಮಡಿಯ ಉಡಿಗೆಯನುಟ್ಟು ಸಖಿಯರೆ | ಕಡಗ ಕಂಕಣವಿಟ್ಟು |
ಸಡಗರ-ಸಂಪತ್ತು ಕೊಡುಕೊಡು ಎನುತಲಿ | ಮೃಡಹರ ಶಂಕರಲಿಂಗನ
ನೆನೆಯುತ | ಹಾಲ ಹೊಯ್ಯುವಾ ಬನ್ನಿರೆ | ನಾಗೇಶಗೆ ಹಾಲ ಹೊಯ್ಯುವಾ
ಬನ್ನಿರೆ || ೨ ||

ತಂದೆ ತಮ್ಮನ ಪಾಲು ನಾಗೇಶಗೆ | ಇಂದು ನೀಡುವ ಹಾಲು ನಾಗೇಶಗೆ |
ಜಡೆಯ ಶಂಕರಲಿಂಗ | ನಮ್ಮ ಬಂಧು-ಬಳಗಕ್ಕೆಲ್ಲ | ಚೆಂದ ಚೆಂದದಲೊಂದು
ಕಂದನ ಕೊಡುಯೆಂದು | ಹಾಲ ಹೊಯ್ಯುವಾ ಬನ್ನಿರೆ | ನಾಗೇಶಗೆ ಹಾಲ
ಹೊಯ್ಯುವಾ ಬನ್ನಿರೆ || ೩ ||

ಸಾಲು ನಾಗರ ಕಲ್ಲಿಗೆ ಬಹುವಿಧ ಕಾಳು ಕಾಳಲಿ ಅಲ್ಲಿಗೆ | ಬಾಲ್ಯ ಸಿಂಗರ
ದಿಂದ ಬೋಲ ಬಗರಿಯ ನಾಡಿ | ಭಾವ ಭಕ್ತಿಗಳಿಂದ ಹಾಲು-ಸಕ್ಕರೆ ಕೂಡಿ |
ಹಾಲ ಹೊಯ್ಯುವ ಬನ್ನಿರೆ | ನಾಗೇಶಗೆ ಹಾಲ ಹೊಯ್ಯುವಾ ಬನ್ನಿರೆ || ೪ ||

ಪ್ರೇರಣಾ ಪ್ರತಿಭಾದೇವಿ | ಚೇತನಾ ರಾಚಕ್ಕ ಕರುಣಾದೇವಿ | ಮಂಗಳ
ಮಹಿಳೆಯರು ಸುಖ ಸದನದೊಳ್ ಬೆರೆಯುತ | ಸಿಂಗಾರದಿಂದಲಿ ಶಂಕರಲಿಂಗನ
ಪಾಡುತ ||
ಹಾಲ ಹೊಯ್ಯುವಾ ಬನ್ನಿರೆ । ನಾಗೇಶಗೆ ಹಾಲ ಹೊಯ್ಯುವಾ ಬನ್ನಿರೆ || ೫ ||

---

[ ಹಿಮ್ಮೆ ನಾಗಪಂಚಮಿಯ ಸಂದರ್ಭದಲ್ಲಿ ನಾಗಪ್ಪನಿಗೆ ಮನೆಯಲ್ಲಿಯ ಹೆಣ್ಣು ಮಕ್ಕಳು, ಮೊಮ್ಮಕ್ಕಳು, ಸೊಸೆ ಎಲ್ಲರೂ ಹೌಸು ಹರುಷಗಳಿಂದ ಸಿಂಗಾರಾಗಿ ಭಯಭಕ್ತಿಗಳಿಂದ ಹಾಲು ಹೊಯ್ಯುವ ಮತ್ತು ಎಲ್ಲರಿಗೂ ಪರಶಿವನು, ಶಂಕರಲಿಂಗನು ಸಂತತಿ ಸುಖಸಂಪತ್ತು ಗಳ ವರಗಳನ್ನು ಬೇಡುವ ಮಧುರ ಸನ್ನಿವೇಶವನ್ನು ಕಂಡು ಶ್ರೀ. ಶಿವಲಿಂಗಪ್ಪನವರು ಈ ಕವನ ವನ್ನು ಕಟ್ಟಿ ಕಕ್ಕುಲತೆಯಿಂದ ಭಕ್ತಿನಿರ್ಭರತೆಯಿಂದ ಸಂತಸಪಟ್ಟಿರುವುದರಲ್ಲಿ ಸಂದೇಹವೇನು? ]

---

## ನನ್ನವರಿಗಾಗಿ—೫



ಶ್ರೀ. ಶಿವಲಿಂಗಪ್ಪನವರ ಸೊಸೆ—
ಶ್ರೀಮತಿ ಪ್ರೇಮಲಾತಾಯಿ

### ಅಕ್ಕ ಪ್ರೇಮಲಾತಾಯಿಗೆ

ಮನೆಗೆ ಮಂಗಳೆಯಾಗಿ ಭಾಗ್ಯದಾ
ದೇವತೆಯಾಗಿ
ಶಿವಯೋಗಿ ಸತಿಯಾಗಿ ಬಂದೆ ನೀ
ತಾಯೇ—
ಸತಿಧರ್ಮವನ್ನರಿತೆ ಪತಿಸೇವೆಯನು
ಗೈದೆ
ಪತಿಯು ಪಶುಪತಿ ಸಲುಗೆ ಎಂದು
ಬಗೆದೆ
ಕಾಯವಳಿದರು ನಿನ್ನ ಕೀರ್ತಿ ತಾ-
ನಳಿಯುವದೆ?
ಅಳಿದು ಉಳಿದಿಹ ಅಕ್ಕ ಪ್ರೇಮಲಾ
ತಾಯಿಯೇ.

---

[ ತಮ್ಮ ಏಕಮಾತ್ರ ಚಿರಂಜೀವರಾದ ಶ್ರೀ. ಶಿವಯೋಗಪ್ಪನವರ ಮೊದಲನೆಯ ಹೆಂಡತಿ ಲಿಂಗೈಕ್ಯರಾದ ಶ್ರೀ. ಪ್ರೇಮಲಾತಾಯಿಯವರನ್ನು ಕುರಿತು ಶ್ರೀ. ಶಿವಲಿಂಗಪ್ಪನವರ ಹೃದಯ ದಲ್ಲಿ ಮನೆಮಾಡಿಕೊಂಡ ಮಮತೆ, ವಾತ್ಸಲ್ಯ ಮತ್ತು ಆದರ-ಗೌರವದ ಭಾವನೆಗಳು ಈ ಕವನ ದಲ್ಲಿ ಮೈದಾಳಿವೆ. ಈ ಚಿಕ್ಕ ಶೋಕಕವನವನ್ನು ಓದುತ್ತಾ, ಮನನಮಾಡುತ್ತ ಇರುವಾಗ ನಮ್ಮ ಹೃದಯವನ್ನು ಕರುಳನ್ನು ಸೂಕ್ಷ್ಮವೇದನೆಯೊಂದು ಕೊರೆಯುತ್ತಿದ್ದಂತೆ ಭಾಸವಾಗುತ್ತದೆ! ಅಷ್ಟು ಭಾವನೆ ತುಂಬಿ ಬಂದಿದೆ ಇಲ್ಲಿ! ]

---

## ನನ್ನವರಿಗಾಗಿ—೬

### ಮಾತೆಯ ಮಮತೆ

ಬಾ ಮಾತೆ ! ಬಂಗಾರೆಮ್ಮ ದಯೆ ಬೆಳಕು ಎದೆ ತುಂಬಿ |
ನಿನ್ನ ಹೃದಯದ ಹಾಲ ಸುಧೆ ಹಣಿಸಿ ತಣಿಸಿ ||

ಲೀಲೆಯಲಿ ನಗೆದೋರ್ವ ಹಾಲ್ಮೊಗದ ಮಗುವಿನ |
ಕೈಕಮಲ ಹುಡಿಯೆಲ್ಲ ಒಳೆದು ತೊಳೆದು || ೧ ||

ಬಾಡಿ ಕಂದಿದ ಭಾವ ಹೊನಲಾಗಿ ಹರಿಯುತಿರೆ |
ನಿನ್ನೊಡಲ ಕಡಲಲ್ಲಿ ಸುಖ ಸುಳಿಯಬಹುದು ||

ಮುಖಭಾವ ಭಾವಮುಖ ಕಳೆದುಂಬಿ ತುಂಬಿರೆ |
ನಿನ್ನ ನಚ್ಚಿನ ಕೆಚ್ಚು ತಿಳಿದುಂಬಿ ಬೆಳೆಯಬಹುದು || ೨ ||

ನಿನ್ನೆದೆಯ ಹಾಲ್ಜೇನ ಮಧುರತೆಯ ಸವಿಸುಖವು !
ನನ್ನಲ್ಲಿ ಅವಿರತವು ಅನುಗಾಲವಳಿಯದಿರಲಿ ||

ಹಾಯ್ | ತಾಯೆ ಬಂಗಾರೆಮ್ಮ ನಿನ್ನ ಕರುಣೆಯ ದೃಷ್ಟಿ |
ಮಸುಕಾದರೆನ್ನ ಸರ್ವಸ್ವ ಬಾಳು ಹಾಳು || ೩ ||

ನಿನ್ನ ನಗು ನಲುಮೆಯ ಕೈತೋಳ ತೆಕ್ಕೆಯಲಿ |
ನನಗೆ ಹರಕೆಯನ್ನಿತ್ತು ಕೈಪಿಟ್ಟು ಜೋಗುಳ ಪಾಡು ||

ನಿನ್ನ ದೇಹದ ಸೌಖ್ಯ ನಿನ್ನ ಲಾಲಿಯ ಇಂಪು |
ನಿನ್ನೋರ್ವ ಕುವರನಲಿ ಮೈಗೊಂಡು ಬರಲಿ || ೪ ||

ನಿನ್ನ ಕರುಳಿನ ಧ್ವನಿಯ ದೂರಾಗಿ ಕೇಳಿದರೆ |
ನನ್ನೆದೆಯು ತಳಮಳದಿ ಮಳುಗೇಳುತಿಹುದು ||

ದಿನವೆಲ್ಲ ಕಾಳ್ಗಿಚ್ಚು | ಭಾವೆಲ್ಲ ಬರಿಹುಚ್ಚು |
ಮುಂದಿನ ಮಾರ್ಗವನು ಮರೆಯಾಗಿಸುತಿಹುದು || ೫ ||

ಬಾರಮ್ಮ !! ಕರುಳನ್ನು ಮರೆಯದಿರು |
ಕಣ್ಮುಚ್ಚಿ ಮೈಮರೆತು ಕಕ್ಕುಲತೆಯಲಿ ||
ಬೇಗ ಪೊರೆ ಬಾ ತಾಯೆ ! ಸಮಭಾವದಲಿ ನಲಿಸು |
ಬೆಳಕಿನ ಚಿರ ನಿಲಯ ವೈಭವವ ತೋರಿ ಹರಸು || ೬ ||

———

[ಶ್ರೀ ಬಂಗಾರೆಮ್ಮನವರು ಶ್ರೀ. ಶಿವಲಿಂಗಪ್ಪನವರ ತಾಯಿ. ಮಾತೆ ಬಂಗಾರೆಮ್ಮನವರನ್ನು ಕುರಿತು ಈ ಕವನದಲ್ಲಿ ಶ್ರೀ. ಶಿವಲಿಂಗಪ್ಪನವರು ತಮ್ಮ ಹೃದಯದಲ್ಲಿಯ ಮಮತೆಗೆ ರೂಪವನ್ನು ಕೊಟ್ಟಿರುವರು. ತಾಯಿಗೆ ಏಕಮಾತ್ರ ಪುತ್ರರು ಶ್ರೀ. ಶಿವಲಿಂಗಪ್ಪನವರು ; ಅಂದ ಮೇಲೆ ತಾಯಿಮಕ್ಕಳ ಮಾಯೆಮಮತೆಯಲ್ಲಿ ಈ ತೆರನಾದ ಭಾವನೆಯ ನಿರ್ಭರತೆ ಉಕ್ಕಿ ಕವನದಲ್ಲಿ ಮೈದಾಳಿದುದರಲ್ಲಿ ಅಚ್ಚರಿಯೇನು ? ]

---

## ನನ್ನವರಿಗಾಗಿ—೭



ವಾರಾಣಸಿಯ ಶ್ರೀ ಅನ್ನಪೂರ್ಣಾ ಮಂದಿರದಲ್ಲಿ
ಪೂಜಾನಿರತ ಶ್ರೀ. ಶಿವಲಿಂಗಪ್ಪನವರು

### ಅಣತಿಯ ಕೊಡು ತಾಯೆ

ಅಣತಿಯ ಕೊಡು ತಾಯೆ | ಮನವ ನಿನ್ನೆಡೆಗೆ ||.
ಮುಡಿಪಿಡುವೆ ನಲ್ತಾಯೆ | ಹರಣ ನಿನ್ನಡಿಗೆ ||೧||

ಕಳುಹಿಸಿತು ಕಾಶಿಗೆ ಇಂದು | ನಿನ್ನ ನುಡಿ ಹರಸಿ |
ತಿಳುಹಿಸಲು ಜಗದಂಬು | ಎಲ್ಲವನು ಮರೆಸಿ || ೨ ||

ಬಿರುಗಾಳಿ ಬೀಸಿ ಹೊಡೆಯಿತೊಮ್ಮೆ | ಭೀಕರತೆಯ ತಾಳಿ |
ಕಾಳಕಗ್ಗತ್ತಲೆಯೆ ಬಂತು | ಮಾನ ಮನೆಯು ತಾಳಿ- || ೩ ||

ಹಾದಿಗಾಣದ ಹಾಗಾಯ್ತು | ಆ ಸಮಯ ಅಂದು- ||
ಭೀಕರತೆಗೆದೆ ಕೊಟ್ಟದ್ದು ಶಿವನ | ಕೃಪೆಯೆ ಸತ್ಯ ಎಂದು || ೪ ||

ಭವವಳಿಯಲಿನ್ನೆಂತು ಈ ಜಗದಿ ನಾನು |
ಹೇಳು ನಿಲ್ಲಲಿ ಎಂತು? ಕೈ ಬಿಡಲು ನೀನು || ೫ ||

ನನ್ನ ಇಹಸುಖ ತೃಪ್ತಿ ಅಂದು | ಭಿನ್ನ ಭಾವದಲಿ ಬಂದು ||
ನಿನ್ನ ಹಟವನ್ನು ನೀನು ಎಂದು ಮುನ್ನ ಬೆಡಲಿಲ್ಲವಲ್ಲ || ೬ ||

ಇಳೆಯ ಇರವಿನ ಭೀತಿ ಕಂಗೆಡಿಸಿತೆನ್ನ |
ಇಳೆಯ ಡಾಂಭಿಕ ರೀತಿ ಮತಿಗೆಡಿಸಿತೆನ್ನ || ೭ ||

ತನ್ನವರು ನನ್ನವರು ಎಂಬುವದು ಮಿಥ್ಯ ||
ಎಂಬ ನುಡಿಯನು ಇಂದು ತೋರಿಸಿತು ಸತ್ಯ || ೮ ||

ಎತ್ತಿ ನಾ ತೆಗೆದುಕೊಳೆ ಹೂವೆ ಹಾವಾಯ್ತು |
ದೈವ ಮುನಿದಿರಲಿಂತು ಬೆಲ್ಲ ಬೇವಾಯ್ತು || ೯ ||

ಈ ಜಗದಿ ಬಂದೆಲ್ಲ ಭೋಗಿಸಿದುದಾಯ್ತು |
ಒಲ್ಲೆನೊಲ್ಲೆನು ತಾಯೆ ಬಾಳು ಸಾಕಾಯ್ತೆನಗೆ || ೧೦ ||

ಮನವು ನಿನ್ನೆಡೆ ತಾಯೆ ಒಡಲೊಳೆತ್ತಿಕೋ ||
ತಪ್ಪ ಮನ್ನಿಸಿ ಕಾಯೆ ವಾತ್ಸಲ್ಯಭಾವದಲಿ || ೧೧ ||

ಬಗೆಮೊಡೆಯ ನೀನೆ ಕಾಣುತಿಹೆ ಸತ್ಯ ||
ಹೊರಗಣ್ಣಿಗೇಕೋ ನೀ ಕಾಣುತಿಹೆ || ೧೨ ||

———

[ ಮಮತೆಯ ಮಾತೆ ಮತ್ತು ಮಾಯೆಯ ಮಡದಿ ಇವರೊಡನೆ ಶ್ರೀ. ಶಿವಲಿಂಗಪ್ಪನವರು ಹೂಡಿದ ಸಂಸಾರದಲ್ಲಿ ಭೀಕರ ಬಿರುಗಾಳಿಯ ಭೋರಾಟ ಬೆರೆಯಿತು! ಹೃದಯದಲ್ಲಿ ಸಂತಪ್ತ

ಭಾವನೆಗಳು ತಾಂಡವವಾಡಿದವು! ಮನದ ಮಾಯಾ-ಮಮತೆ, ಹೃದಯದ ಕೀಸರುಬೇಸರು ಮುಂತಾದ ವಿರೋಧಿ ಭಾವನೆಗಳ ತಾಕಲಾಟದಲ್ಲಿ ಶ್ರೀ. ಶಿವಲಿಂಗಪ್ಪನವರ ಅಂತರಾತ್ಮ ಬೆಂದು ಬೇಗುದಿಗೊಂಡಿತು. ಬೆಂದ ಎದೆಯ ಆ ನೋವು ಅವ್ಯಕ್ತ ವೇದನೆಯಾಗಿ ಈ ಕವನದಲ್ಲಿ ಮೈದಾಳಿ ಉಮ್ಮಳಿಸುತ್ತಿದೆ! ]

———

## ನನ್ನವರಿಗಾಗಿ—೮

### ಈ ಹಾರ ಶಿವಣ್ಣನ ಕೊರಳಲಿ ಚೆಲುವ ಚೆಲುವಾಗುತಿರಲಿ

ಸಂಸಾರ ನೌಕೆಯಲಿ ಕರ್ಣಾಧಾರನಾಗಿ |
ಸುಖ ದುಃಖ ಸಾಗರದಿ ಪಯಣ ಬೆಳೆಸು ||
ಅಲೆಗಳಾಟೋಪಕ್ಕೆ ಮೀನುಗಳ ಬಡಿತಕ್ಕೆ |
ಅಲುಗದೆಯೆ ನಡೆ ಮುಂದಕಿಹುದು ಸೊಗಸು || ೧ ||

ಜೀವನವು ಶೋಕಮಯವಲ್ಲ ಸುಖಮಯವೆಂದು |
ತೋರಿಸಲಿ ನಿನ್ನ ಬಲ ನಡೆ, ನುಡಿಗಳನಿತು ||
ಸಾರ ಸಂಸಾರ ನಿಸ್ಸಾರವೆನಿಸದೆ ನಿನಗ |
—ಪಾರ ಸುಖ ಸೌಭಾಗ್ಯ ದೊರೆಯಲನಿತು || ೨ ||

ಮನಸು ಮನಸೊಂದಾಗಿ ಜೇನು ಸಕ್ಕರೆಯಂತೆ |
ನೆನಸು ಕನಸುಗಳಲ್ಲೂ ಸರ್ವರೊಳು ಬೆಸಗೆಯಾಗಿರಲಿ ||
ಹರಿಸದಾಡುಂಬೊಲದಿ ಸಂಸ್ಕೃತಿಯ ಮೇಳದಲಿ |
ಬೆರೆತು ಹೃದಯವು ಸತತ ಸುಖಶಾಂತಿ ತರಲಿ || ೩ ||

ಬಾಳಗಾಳಿಗೆ ಸಿಲುಕಿ ಕಳವಳವ ಮನದೆ ನೀ |
ತಾಳಲೆಡೆಯಿರದು ನಗೆಗಡಲ ಸೀಮೆಯಲಿ ||
ಬಾಳಬಲ ತೋಂಟದಲಿ ನಿನ್ನ ವಂಶಜರು ಚಿರಂ |
ಬಾಳಿರಲಿ ಫಲಿಸಿರಲಿ ಸಂತಸವ ತರಲಿ || ೪ ||

ಸಾಗದಿರು ನೀ ದೂರ ಧನದಾಶೆಗೆ ಮನ ಮುಂದೆ |
ಬಾಗಿರಲಿ ನಿನ್ನ ಮನ ನಾಡು ಜನಜೀವಿಗಳಲಿ ||
ಕರ್ಮಯೋಗಿಯಾಗಿ ಧರ್ಮ-ನೀತಿಯನರಿತು |
ನಿರ್ಮಲದ ಸದ್‌ಹೃದಯ ದಯೆಯು ತುಂಬಿರಲಿ || ೫ ||

ನಿನ್ನ ಜೀವನದ ಜಯ ಮಂಗಲದ ಶುಭ ದಿನಕೆ |
ರನ್ನ ವಿದ್ವಜ್ಜನ ಹೃದಯದೊಳಾಯ್ದು ನಲುಮೆಯಲಿ ||
ಚಿನ್ನ ನುಡಿಮುತ್ತುಗಳ ಕೋದು ಗೈಯ್ದೀಹಾರ |
ಹೊನ್ನ ಶಿವಣ್ಣನ ಕೊರಳಲಿ ಚೆಲುವ ಚೆಲುವಾಗುತಿರಲಿ || ೬ ||

ಸತ್ತೀರ್ಥ ಸುಕ್ಷೇತ್ರ ಸತ್ಪುರುಷರ ಸು-ದರ್ಶನ ಸೇವೆ ನಿನಗಾಗಲಿ |
ಸದ್ಭಾವ ಆಳವಟ್ಟು ಅನುಭವದ ಆತ್ಮಜ್ಯೋತಿ ಬೆಳಗಲಿ ||
ಇಷ್ಟ ಶಂಕರಲಿಂಗ ದೇವರಿಗೆ ನಿನ್ನ ಶಿರವು ಬಾಗಲಿ |
ಶ್ರೇಷ್ಠತರ ಕೃಪೆಮಾಡಿ ನಿನ್ನನವನು ತಣಿಸಲಿ || ೭ ||

ಜೀವ ಶಿವನೊಳ್ ಬೆರೆಯಲು ಸಿದ್ಧಿ
ಶಿವಧ್ಯಾನ ಸಾಧನ "ಶಿವರಾಜಧಾನಿ" ಯೊಳ್
ಇರುತಿರುವ......... ಶಿವಲಿಂಗ.

---

[ ಮಾನಸಿಕ ಆಧ್ಯಾತ್ಮಿಕ ಶಾಂತಿಗಾಗಿ ಶ್ರೀ. ಶಿವಲಿಂಗಪ್ಪನವರು ಕಾಶಿಯಲ್ಲಿ ಸುಮಾರು ಎರಡು ವರ್ಷ ಶಿವಶರಣರ ಪಾವನ ಸಾನಿಧ್ಯದಲ್ಲಿ ಆಧ್ಯಾತ್ಮಿಕ ಸಾಧನೆಯನ್ನು ಮಾಡಿದರು. ಆ ಸಮಯದಲ್ಲಿ ಶ್ರೀ. ಶಿವಲಿಂಗಪ್ಪನವರ ಏಕಮಾತ್ರ ಪುತ್ರರಾದ ಶ್ರೀ. ಶಿವಯೋಗಪ್ಪನವರು ಕಾಶಿಗೆ ಬಂದಾಗ ಈ ಕವನವು ಮೈದಾಳಿತು. ಧೀರ, ಸುಸಂಸ್ಕೃತ, ಸುಬುದ್ಧ, ಪ್ರೀತಿಪ್ರೋತ ಮತ್ತು ಉದಾತ್ತವಾದ ಮಾರ್ಗದರ್ಶಕವಾದ ವಿಚಾರಗಳ ಈ ಕವನ—" ಈ ಹಾರ ಶಿವಣ್ಣನ ಕೊರಳಲಿ ಚೆಲುವ ಚೆಲುವಾಗುತಿರಲಿ" ಎಂಬ ಕವನಕಾರರ ಹಾರೈಕೆ ಫಲಪ್ರದವಾಗಿರಲು ಸಾಕು. ]

---

## ನನ್ನವರಿಗಾಗಿ—೯

### ಶಿವಣ್ಣನ ಬಾಳದೀಪ ಬೆಳಗಲಿ

ದೀಪ ಬೆಳಗುತಲಿರಲಿ, ಬೆಳಕು ಚೆಲ್ಲುತಲಿರಲಿ |
ತನ್ನತನದರಿವು ತನಗಾಗುತಿರಲಿ |
ಬಿರುಗಾಳಿ ಸೊಂಕುತಿರೆ ಕದಲದೆಯೆ ಬೆಳಗುತಲಿ
ಒಳಹೊರ ಭೇದಭಾವವನು ಸದೆ ಬಡೆಯುತಿರಲಿ || ೧ ||

ರಶ್ಮಿಗಳ ಚೆಲ್ಲುತಲಿ ಝಗ ಝಗಸುತಿರುವಲ್ಲಿ |
ತನ್ನೊಳಗೆ ಒಂದಿನಿತು ತಿಳಿ ಮೂಡುತಿರಲಿ |

ಜ್ವಾಲೆ ನಾಲಗೆಯಿಂದ ಉರಿಗದಿರ್ಗಳನುಗುಳಿ |
ನೋಡುವವರ ಕಣ್ಣು ಕುಕ್ಕದಿರಲಿ || ೨ ||

ಈ ತೆರದಿ ಬಾಳ್-ದೀಪ ಸಂಸಾರ ಸಾಗರದಿ |
ಜೋಕೆಯಿಂ ಬೆಳಗುತ್ತ ದಡ ಸೇರಲಿ |
ಆದರ್ಶವಾಗಿ ಅದು, ಜಗವ ರಂಜಿಸುತಿರಲಿ |
ಕೀರ್ತಯನು ಎಲ್ಲೆಡೆಗೆ ವ್ಯಾಪಿಸುತಿರಲಿ || ೩ ||

———

[ ಇದರ ಹಿಂದಿನ ಕವನವು ಶ್ರೀ. ಶಿವಣ್ಣನನ್ನು ಸಂಬೋಧಿಸಿ, "ಈ ದಾರಿಯಿಂದ ನಡೆದು ನೀನು ಸ್ವಪರ ಕಲ್ಯಾಣವನ್ನು ಸಾಧಿಸು, ಆತ್ಮೋದ್ಧಾರವನ್ನು ಮಾಡಿಕೋ" ಎಂದು ಆಶೀರ್ವದಿಸಿದುದಾದರೆ, ಈ ಕವನವನ್ನು ಕಟ್ಟುವಾಗ ಶ್ರೀ. ಶಿವಲಿಂಗಪ್ಪನವರು ಅಂತರ್ಮುಖಿಗಳಾಗಿ "ಶಿವಣ್ಣನ ಬಾಳದೀಪ ಬೆಳಗಲಿ" ಎಂದು ವಿಶ್ವದಲ್ಲಿನ ಸತ್‌ಶಕ್ತಿಗಳಿಗೆ ಶಿವಶಕ್ತಿಗಳಿಗೆ ಪ್ರಾರ್ಥಿಸಿಕೊಂಡಿರುವರು. ]

———

## ನನ್ನವರಿಗಾಗಿ—೧೦

### ಮನೆಯು ಮಾನವ ಜೀವ ಲೀಲಾಂಗಣ

ಮನೆಯು ಮಾನವ ಜೀವ ಲೀಲಾಂಗಣ |
ಜನಿಸಿದ ಜೀವನ ಜ್ಯೋತಿರ್ಮಯ ಭಾವಾಂಗಣ || ಪಲ್ಲ ||

ಎಲ್ಲೆಲ್ಲು ನಗೆಮೊಗವು ಪ್ರಗತಿಪರ ವ್ಯವಹಾರ |
ಉಲ್ಲಾಸ, ಸಹನೆ, ಸರಳ, ಸುಖ ಸಂತೋಷದಾಗರ ||
ಸಲ್ಲಲಿತ ಸದ್ಭಕ್ತಿ ಸತ್ಕಾರ್ಯ ಇವು ದೇವನಾಧಾರ |
ಎಲ್ಲಿಹವೋ, ಮನೆಯೊಳಾ ಕಲಿಪುರುಷ ನಿಲ್ಲಲಾರ || ೧ ||

ಅಳತೆಯದು ಆತಿಥ್ಯ ಸತ್ಕಾರ, ಅಳೆಯಲಾಗದು ತೃಪ್ತಿ |
ಹೊಳೆದು ಹೊಳೆಯುತ ಕಣ್ಣರಳಿಸುವ ಆದರದ ಪ್ರೀತಿ ||
ಅಳಿಯದಾ ಆರೋಗ್ಯ ಸುಜ್ಞಾನದಲಿ ಆಸಕ್ತಿ |
ತಿಳಿಯಲಿವುಗಳ "ಸುಖಸದನ" ದಾ ಭಾಗ್ಯ ಭರತಿ || ೨ ||

ಪ್ರೇಮ-ಸೌಹಾರ್ದ ಸುಳಿಗಾಳಿ ಸೂಸುತಿರಲಿ |
ನೇಮ ನಿತ್ಯ ಸತ್-ಕರ್ಮಗಳ ಶ್ರಮದ ದಣಿವಾರಲಿ ||

ನಿಮ್ಮೆಡದಿ ಕರುಣಾದೇವಿ ನೇಹದಿಂ, ಸುಜ್ಯೋತಿ ಬೆಳಗಲಿ |
ಕ್ಷೇಮದಿಂದೊಡಗೂಡಿ ದಿವ್ಯಪ್ರತಿಭೆಯು ಬಾಳ ಬೆಳಗಲಿ || ೩ ||

ಜಗದ್ಗುರುಗಳ ಶಿವಧ್ಯಾನದ ಶಿವಪೂಜೆಯು ಅಲ್ಲಿ |
ಸಾಗಿರಲಿ ಸದ್ಭಾವಿಗಳ ಸದ್ಬೋಧೆ ಸದಾ ನಿತ್ಯದಲ್ಲಿ ||
ಭೋಗಿಸಲು ದೇವ ನಿರ್ಮಿಸಿಹನು ಆ "ಸುಖಸದನ"ದಲ್ಲಿ |
ರಾಗದಿ ಗೃಹದಲಿ ನಿಮ್ಮಗಳ ರಕ್ಷಿಪ ಜಡೆಯ ಶಂಕರಲಿಂಗನಲ್ಲಿ || ೪ ||

———

[ ಸದ್ವ್ಯವಹಾರ, ಸುವಿಚಾರ, ಸದ್ವರ್ತನೆ, ಸದ್ಭಕ್ತಿ, ಸತ್ಕಾರ್ಯ, ಸತ್ಕಾರ, ಸೌಹಾರ್ದ, ಸದ್ಬೋಧೆ, ಸದ್ಭಾವ ಇವೆಲ್ಲವುಗಳಿಂದ ಮನೆಯು ಸುಖಸದನವಾಗುವದು, ಮಾನವ ಜೀವ ಲೀಲಾಂಗಣವಾಗುವದು ಎಂದು ಕವನಕಾರರು ಧನ್ಯವಾದಂಥ, ಧನ್ಯವಾಗಬಹುದಾದಂಥ ಗೃಹಸ್ಥಾಶ್ರಮಿಯ ಸರಸೋದಾತ್ತ ಸಂಸಾರದ ಸೊಬಗನ್ನು ಬಣ್ಣಿಸಿರುವರು. ಇಂಥ ಸಂಸಾರ ನಿಮ್ಮದಾಗಲಿ ಎಂದು 'ನಿಮ್ಮಗಳ'ನ್ನು ಹರಸಿರುವರು. ]

———

## ನನ್ನವರಿಗಾಗಿ—೧೧

### ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ ||

ಉದ್ಯೋಗವುಳ್ಳವನ ಮೆಚ್ಚುವದು ಸಿರಿ ಬಂದು |
ಉದ್ಯೋಗ ಹೊಲಗೆಲಸದೊಳಿರುವವನಿಂದು |
ಸಿದ್ಧ ನೇಗಿಲಯೋಗಿಗಳ ವೃದ್ಧಿಸುವನಿಂದು ಬಸವೇಶ || ೧ ||

ನೆಲಬಿಟ್ಟು ಫಲವಿಲ್ಲ ಜಲಬಿಟ್ಟು ಜೀವಿಲ್ಲ |
ಮೇಟಿಗಿಂತ ಶ್ರೇಷ್ಠ ಕಾಯಕವಿಲ್ಲ ಇಳೆಯೊಳಗೆ |
ಭೂಮಾತೆ ಜಗದಾತೆ ಅನ್ನದಾತೆ ಬಸವೇಶ || ೨ ||

ಅನ್ನದೇವರ ಮುಂದೆ ಇನ್ನು ದೇವರು ಉಂಟೆ ? |
ಅನ್ನವಿರುವನಕ ಪ್ರಾಣವೀ ಜಗದೊಳಗೆ |
ಅನ್ನವೇ ಜೀವನದ ನಿಜದೈವ ಬಸವೇಶ || ೩ ||

ಕಾಳು ದವಸಗಳನ್ನು ಬಳಸುಳಿಸಿ ಬೆಳೆಯುತ |
ಆಳು ಮಕ್ಕಳ ಹಿತವ ಗೈದು ಆನಂದಿಸುತ |
ಮೇಳುಗೂಡಿದ ಒಕ್ಕಲುತನವು ಧನ್ಯವದು ಬಸವೇಶ || ೪ ||



ಶ್ರೀ ಶಿವಲಿಂಗಪ್ಪನವರ ಒಕ್ಕಲುತನದ ಚಟುವಟಿಕೆಗಳ ಕರ್ಮಭೂಮಿ
ಹೊಲದಲ್ಲಿ ಅವರ ದನಕರು, ಆಳುಮಕ್ಕಳು ಮುಂತಾದವರು

ಹಿಡಿದಿಟ್ಟ ಬೀಜವನು ಗಂಧಕದ ಹುಡಿಬೆರಸಿ |
ಕೆಸರಿಟ್ಟು ಕೂರಿಗೆಯು ಆಳವಾಗಿಳಿಸಿ |
ಬಿತ್ತಿದೊಡೆ ಸಸಿ ಭರದಿ ನಾಟುವದು ಬಸವೇಶ || ೫ ||

ಮಿತಕೆಲಸ ಹಿತ ತಿನಿಸು ಶುಚಿಯಾಗಿರಿಸಿದೊಡೆ |
ಜೊತೆಗಿರುವ ದನ ಕರುಗಳ ಪ್ರೀತಿಸಿದೊಡೆ |
ಬಹುದಿನ ಬಾಳಿ ಬೆಳಗುವವು ಬಸವೇಶ || ೬ ||

ರಾಶಿಯಾದೊಡೆ ಗೊಬ್ಬರ ಹರವಿ ನೇಗಿಲವನು |
ಹೊಡಿಸಿದೊಡೆ ಭೂಮಿತಾಯ್ದುಸಿಯುಳಿದು |
ಬಿಸಿಲ್ಕಾವು ಆ ಹೊಲಕೆ ಕಸುವಹುದು ಬಸವೇಶ || ೭ ||

ಹೊಲವ ಹೊಂಬೆಳಕು ಮುಂಬರುವ |
ಹೊಸ ಬೆಳೆಗೆ ಜಗವ ತುಂಬರುವ |
ಹೊಣೆ ಹೆಗಲ್ಪೊತ್ತು ಬಂದಿಹನು ಬಸವೇಶ || ೮ ||

ನುರಿತೆತ್ತ ಹೂಡುವದು ನಿಂತೊಮ್ಮೆ ಹರಗುವದು |
ಬಿತ್ತುವಾ ಮುನ್ನೊಮ್ಮೆ ಹರಗಿ ಬಿತ್ತಿ ಕಳೆ ತೆಗೆದರೆ |
ಬೆಳೆಯು ಎತ್ತುಗೈಯುದ್ದ ಬೆಳೆಯುವದು ಬಸವೇಶ ||೯||

ಭೂಮಿ ಏರಿಳಿತಗಳೆಂದು ಸಮತಳದಿಂ ಸಾಗಿ |
ನೆಲ ನೀರುಣ್ಣುವ ತೆರದಿ ಸಮಯಾನುಕೂಲಾಗಿ |
ವಡ್ಡು-ಹೊಳೆಕಟ್ಟೆಗಳ ಕಟ್ಟುವದೊಳಿತು ಬಸವೇಶ ||೧೦||

ಉತ್ತೊಮ್ಮೆ ಹರಗದಲೆ ಬಿತ್ತೊಮ್ಮೆ ನೋಡದಲೆ |
ಹೊತ್ತೇರಿ ಹೊಲಕೆ ಹೋಗುವಾಳಾದರೆ |
ಹೊತ್ತುಸಾಲ ಹೊಲಒತ್ತಿ ಬೀಳುವದು ಬಸವೇಶ ||೧೧||

ಹರಗದಾ ಎತ್ತಾಗಿ ಬರಡಾದ ದನವಾಗಿ |
ಹರಟೆ ಹೊಡೆಯುವ ಆಳಾದರಾ ಹೊಲ |
ಬೀಳಾಗಿ ಬೀಡು ಸೆಳೆಯುವದು ಬಸವೇಶ ||೧೨||

ಉದ್ಯೋಗ—ದಿಂದಲೆ ಜೀವ ಶುದ್ಧವಾಗುದು ಭಾವ |
ಸದುದ್ದೇಶನಿರತ ಶ್ರೀಕಾಶಿವಾಸಿ ಶಿವಲಿಂಗನಾ |
ಸಿದ್ಧಿಯನು ನೀಡೆಂದು ಕೋರುವೆನು ಜಗಜ್ಯೋತಿ ಬಸವೇಶ ||೧೪||

---

["ಒಕ್ಕಲಿಗನ ತಮ್ಮ" ಎಂದು ತಮ್ಮ ವಿಷಯದಲ್ಲಿ ಅಭಿಮಾನದಿಂದ ಹೇಳಿಕೊಳ್ಳುವ ಶ್ರೀ. ಶಿವಲಿಂಗಪ್ಪನವರು ಒಕ್ಕಲಿಗಣ್ಣಂದಿರಿಗೆ ಆದರ್ಶ ಒಕ್ಕಲುತನದ ರೀತಿನೀತಿಗಳನ್ನು ಈ ಕವನದಲ್ಲಿ ಕಟಿದು ಕೈಯತ್ತಿ ಕೈಮಾಡಿ ತೋರಿಸಿರುವರು. ಕಾಶಿವಾಸಿಗಳಾಗಿ ಆಧ್ಯಾತ್ಮ ಸಾಧನೆಯಲ್ಲಿ ನಿರತರಾದರೂ ಒಕ್ಕಲಿಗಣ್ಣಂದಿರ ಒಕ್ಕಲುತನವು ಬಸವನ ಬೇಸಾಯವಾಗಲಿ ಕೈಲಾಸದ ಕಾಯಕವಾಗಲಿ ಎಂದು ಕೋರಿರುವರು.]

---

## ನನ್ನವರಿಗಾಗಿ—೧೨

### ಪ್ರೇರಣೆಗೆ—೧

ಮೊನ್ನೆ ಬಂದು ಹೋದರೇನಾಯ್ತು ಪ್ರೇರಣೆಯೇ
ಮರಳಿ ಬಾ ಮಗುದೊಮ್ಮೆ ಬಾ |

ತಡವಾದರೇನಂತೆ— ಬಿಡುವಾಗಿ ಬಾ, ಬಾ ||
ಮೆಚ್ಚಿ ಮೈ ಮರೆವಂತೆ ತಿರುತಿರುಗಿ ಬಾ ||೧||

ಕಾಲದೇಶವ ಮೀರಿ ನಿತ್ಯ ಸತ್ಯವ ಸಾರಿ ||
ದಿವ್ಯ ಶಕ್ತಿಯ ತೋರಿ ಪ್ರೇರಣೆಯೆ ಬಾ || ೨ ||

ನಿನ್ನೊಂದೊಂದು ನುಡಿಯಲಿ ಬಂಧು ಭಾವವಿರಲಿ |
ನಿನ್ನೊಂದೊಂದು ನುಡಿಯಲಿ ಅಂದ ಆಳವು ಇರಲಿ || ೩ ||

ನಿಯಮ ಸಂಯಮವಿರಲಿ | ಲಾಲಿತ್ಯ ಬೆರೆತಿರಲಿ ||
ಕಲೆಯ ಕೈ ಚಳಕದಿಂ | ಸಲೆ ಪುಳಕವಿರುತಿರಲಿ || ೪ ||

ಭಾವದಲಿ ಮುಚ್ಚುಮರೆ | ಸ್ವಲ್ಪಾದರು ಸುಳಿಯದಿರಲಿ |
ಅನುಭವವ ಮುಗುಳ್ನಗೆ | ಅನುದಿನ ಹರಿಯುತಿರಲಿ || ೫ ||

ತಿಳಿನುಡಿಯ ಹೊಂ ಬೆಳಕು | ಹೊಳೆಯುತಿರೆ ಕ್ಷಣಕ್ಷಣಕು |
ಸರ್ವರಲಿ ಆ ಬೆಳಕು, ತೊಳಕು, ಥಳಕು | ಆವ ಕಾಲದಿ ಆರದಿರಲಿ || ೬ ||

ಮಾತು ಮಾತಿಗೆ ಮಣಿದು | ಹಿರಿಹಿಗ್ಗಿ ನಲಿನಲಿದು ||
ಬಾ ಪ್ರೇರಣೆ ಮನತಣಿದು | ಆತುರದಿ ಬಲು ಬೇಗ ಬಾ || ೭ ||

ಎದೆಯ ಆಳದಲಿಳಿದು | ಮುಳು ಮುಳುಗೆದ್ದು ಬಾ |
ಎಲ್ಲವನು ತಿಳಿತಿಳಿದು | ತೇಲು ತೇಲುತ ಬಾ || ೮ ||

ಹಸುಳೆ ಅಜ್ಞಾನದ ನೆನೆಸಿ | ಅಮರವಾಣಿಯ ನುಣಿಸಿ |
ಅಂತರಾಳ ಪ್ರೇಮ ತೆರೆಸಿ | ಶೀಘ್ರ ಶುಭವೆರಿಸಿ || ೯ ||

---

[ಶ್ರೀ. ಶಿವಲಿಂಗಪ್ಪನವರ ಏಕಮಾತ್ರ ಪುತ್ರರಾದ ಶ್ರೀ ಶಿವಯೋಗಪ್ಪನವರಿಗೆ ಇನ್ನೂ ಮಕ್ಕಳಾಗಿಲ್ಲ. ಅಪತ್ಯವತ್ಸಲರಾದ ಶ್ರೀ. ಶಿವಲಿಂಗಪ್ಪನವರಿಗೆ ಇದೊಂದು ಹೃದಯದ ಕೊರತೆಯಾಗಿದೆ. ಈ ಕೊರತೆಯಿಂದ ಆಗುವ ಹಂಬಲವನ್ನು ಹಲಕೆಲವು ಮಟ್ಟಿಗೆ ಶ್ರೀ. ಶಿವಲಿಂಗಪ್ಪನವರು ತಮ್ಮ ಹೆಣ್ಣುಮಕ್ಕಳ ಹೊಟ್ಟೆಯಲ್ಲಿ ಹುಟ್ಟಿದ ಮೊಮ್ಮಕ್ಕಳನ್ನು ಮೆಚ್ಚಿ ಮುದ್ದಿಸಿ ಮೈದಡವಿ ತಣಿಸಿಕೊಳ್ಳುತ್ತಾರೆ. ಈ ಸಂಗತಿಗೆ ಈ ಪುಸ್ತಕದಲ್ಲಿಯ ಅನೇಕ ಕವನಗಳು ಸಾಕ್ಷಿಯಾಗಿವೆ ಇಂಥದೇ ಇದೊಂದು ಕವನ.

ಕಾಶಿಯಲ್ಲಿದ್ದಾಗ ಹೆಣ್ಣುಮಕ್ಕಳು ಮತ್ತು ಮೊಮ್ಮಕ್ಕಳು ಶ್ರೀ. ಶಿವಲಿಂಗಪ್ಪನವರನ್ನು ಕಂಡು ಅಲ್ಲಿ ಕೆಲವು ದಿನ ಇದ್ದು ಇದ್ದು ಬರುತ್ತಿದ್ದರು. ಹೀಗೆ ಬಂದು ಮರಳಿ ಹೋದ ಪ್ರೇರಣೆಯೆಂಬ ತಮ್ಮ ಮುದ್ದುಮೊಮ್ಮಗಳನ್ನು ಕುರಿತು ಶ್ರೀ. ಶಿವಲಿಂಗಪ್ಪನವರು ಈ ಕವನವನ್ನು ಕಟ್ಟಿರುವರು

ಈ ಮಧುರ ಕವನದಲ್ಲಿ ಸೂಕ್ಷ್ಮವಾಗಿ ಅವ್ಯಕ್ತವಾಗಿ ಶ್ರೀ. ಶಿವಲಿಂಗಪ್ಪನವರು ಕವಿತ್ವ ಶಕ್ತಿಯ ಪ್ರೇರಣೆಯನ್ನೂ ಆವ್ಹಾನಿಸಿರುವರೋ ಏನೊ !]

---

## ಪ್ರೇರಣೆಗೆ—೨



ಕುಮಾರಿ ಪ್ರೇರಣಾ
ಶ್ರೀ ಶಿವಲಿಂಗಪ್ಪನವರ ಮೊಮ್ಮಗಳು

ಮನಸೆಳೆವ ರೀತಿಯಲಿ ಸೀರೆಯ-
ನುಟ್ಟು ಸೆರಗ ಹೊದ್ದು ।
ನೀಳ್ದೋಳ ಹಸುಳೆ ಆಹಹ ।
ಶೋಭಿಪುದೀ ಮುದ್ದು ।
ಭಾರತದ ಸ್ತ್ರೀಧರ್ಮ ತನ್ನ
ಅದೃಶ್ಯತೆಯ ಬಿಟ್ಟು ।
ನಿಂತಿಹುದೆ ಈ ಚಿಣ್ಣ "ಪ್ರೇರಣೆ"-
ಯ ರೂಪ ತೊಟ್ಟು ॥ ೧ ॥

ಅಧರ್ಮ ಅತ್ಯಾಚಾರಗಳ
ಹೆಚ್ಚಳಿಕೆಯ ಕಂಡು ।
ಧರ್ಮ ದೇವತೆಯು ಸೆರಗ
ಟೊಂಕಕ್ಕೆ ಕಟ್ಟಿಕೊಂಡು ।
ಅವನಳಿಯ ನಿಂತಿಹಳೆ
"ಪ್ರೇರಣೆ"ಯ ರೂಪು ಕೊಂಡು ।
ಎರಡೆ ವರುಷದ ಕಂದ ।
ಎಂ ಲೀವಿ, ಎಂ ಗಾಡಿ ॥ ೨ ॥

ಆವ ವರವೈಭವವೊ ಆವ ದಿವ್ಯ ಧರ್ಮದ ಗೊತ್ತೊ ।
ಮುಸಕಾಗಿ ಕಟ್ಟುತ್ತದೆ ಕಣ್ಮುಂದೆ ಇವಳ ನೋಡೆ ।
ಆವ ಸಿರಿಯನೊ ಅಡಿಯೆನಿಸಿ ಕಾಲಕೆಳಗೆ ಮೆಟ್ಟಿ ।
ನಿಂತಿಹಳು ಈ ಕುವರಿ ಸೆರಗು ಬಿಗಿದು ಕಟ್ಟಿ ॥ ೩ ॥

ಪ್ರೇರಣೆ! ನಿನ್ನಿಂದಲ್ತೆ ಮಾನವನ (ಮಾನುವಿನ) ಬಾಳು ।
ನಿನ್ನಿಂದಲೆ ಕಾಶಿಯೊಳು ನಿನ್ನಜ್ಜನಿಗೆ ನಿನ್ನಾತ್ಮನಿಗೆ ಸುಖಬಾಳು ।
ಬಾಳೌ ಕಂದ "ಗುಂಡು ಸಾಬರೆ" ನೂರು ವರ್ಷ ಬಾಳು ।
ಶ್ರೀ ವಿಶ್ವನಾಥ ರಕ್ಷಿಸಲಿ ದಯೆಯಿಂ ನಿನ್ನ ॥ ೪ ॥

---

[ಈ ಕವನವಾದರೂ ಆ ಪ್ರೇರಣೆಯನ್ನು ಕುರಿತ ಆಗಿದೆ. ಮೇಲಿನ ಚಿತ್ರದಲ್ಲಿ ಸೀರೆಯ ನುಟ್ಟು ನಿಂತ ಹಸುಳೆ, ಪ್ರೇರಣೆ, ಸ್ತ್ರೀಧರ್ಮ ರೂಪವೆತ್ತು, ಧರ್ಮದೇವತೆ ಮೂರ್ತಿಮಂತಾಗಿ

ನಿಂತಂತೆ ಎಂದು ಮುಂತಾಗಿ ಭಾಷಾಲಂಕಾರಗಳ ಸಹಾಯದಿಂದ ಶ್ರೀ ಶಿವಲಿಂಗಪ್ಪನವರ ಈ ಮಧುರ ಕವನ ನಮ್ಮ ಮನಮುಟ್ಟುವಂಥದಾಗಿದೆ. "ಗುಂಡುಸಾಬ" ಇದು ಮಮತೆಯ ಹುಡುಗಾಟದ ವಿನೋದದಲ್ಲಿ ಯಾವುದೋ ಸಂದರ್ಭದಲ್ಲಿ ಪ್ರೇರಣೆಗೆ ಇಟ್ಟ ಹೆಸರು. ]

---

## ನನ್ನವರಿಗಾಗಿ—೧೪

### ಹಾಲುಗಲ್ಲದ ಹಸುಳೆ



ಹಾಲುಗಲ್ಲದ ಹಸುಳೆ— ಕುಮಾರಿ ಪ್ರೇರಣಾ

ಹಾಲುಗಲ್ಲದ ಹಸುಳೆ ಹಾಲಕ್ಕಿ
ಯಾಗಿಹುದು |
ಅಜ್ಜಿಯೆನೆ ಸರಬರನೆ ಮಜ್ಜಿಗೆಯ
ಮಾಡುವದು |
ಬೆಣ್ಣೆ ತೆಗೆದಾಗ ಸವನೆವೆಯಿಕ್ಕಿ
ನೋಡುವದು |
ಏನೋ ಚಿಂತಿಸುತಿಹುದು ಏಂ
ರಹಸ್ಯವೋ ಏನೋ ?
ತೊದಲ್ನುಡಿಯ ಕಂದಮ್ಮ ನಾವ-
ರಿವುದೆಂತು ?
ಸಂಸಾರ ಹರವಿಯಲಿ ಸುವಿಚಾರ
ದಧಿಯನ್ನು |
ಜ್ಞಾನ ಕಡೆಗೋಲಿನಿಂ ಕಡೆದು
ಕಡೆದು |
ಕೋಟಿ ಶಿವಮಂತ್ರ ಜಪ ನವನೀತ
ಮಂ ತೆಗೆದು |

ಸವಿಸವಿದು ಶಿವತತ್ವ ಬಗೆದು ನಿಂದು |
ಮುಕ್ತನಾಗೈ ಮನುಜ ಮರಳಿ ಪುಟ್ಟದಿರೆಂದು |
ಬೋಧಿಸುತಿಹಳಲ್ತೆ ಈ ದಿವ್ಯ ಬಾಲೆ |
ಶಂಕರಲಿಂಗನು ಭಕ್ತರಿಗಾಗಿ ಬಾಲರೂಪದೊಳಾಡಿ |
ಪ್ರೇರಣೆಯು ಮಾಡುವನು ಗ್ರಹಿಸುವರು ಭಕ್ತರದನು ||

---

[ ಮೇಲಿನ ಚಿತ್ರದಲ್ಲಿ ಪ್ರೇರಣೆ ಸೀರೆಯನ್ನುಟ್ಟು ಮಜ್ಜಿಗೆಯನ್ನು ಕಡೆಯುವ ರೀತಿಯಲ್ಲಿ ಏವಳು. ತೊದಲ್ನುಡಿಯ ಈ ಕಂದಮ್ಮನನ್ನು ಬಣ್ಣಿಸುತ್ತಲಿ ಶ್ರೀ. ಶಿವಲಿಂಗಪ್ಪನವರು ಉತ್ಪ್ರೇಕ್ಷಾಲಂಕಾರವನ್ನು ಬಳಸಿ, ಮಾನವನಿಗೆ ಭಗವಾನ್ ಶಂಕರಲಿಂಗನು ಈ ಬಾಲರೂಪ ದಲ್ಲಿ ಆಧ್ಯಾತ್ಮದ ಸಂದೇಶವನ್ನು ಆತ್ಮೋದ್ಧಾರ ಪಾಠವನ್ನು ಕೊಡುತ್ತಿರುವನೋ ಏನೋ ಎಂಬ ಕಲ್ಪನೆಯನ್ನು ರೂಪಿಸಿದುದು ಬಹಳ ಸುಂದರವಾಗಿದೆ. ]

———

## ನನ್ನವರಿಗಾಗಿ—೧೫

### ಬೆಳಗಿ ಬಾ ತೊಳಗಿ ಬಾ ಪ್ರೇರಣೆಯೇ

ಬೆಳಗೆ ಬಾ ತೊಳಗಿ ಬಾ । ಪ್ರೇರಣೆಯೆ ಸುಖಸಾರ ।
ಎನ್ನ ಜೀವನ ಹೃದ್ಗುಹೆಯ । ಕತ್ತಲೆಯ ಕಳೆದು ॥ ೧ ॥

ಧರ್ಮಸ್ತಂಬವ ರಚಿಸಿ । ತ್ಯಾಗದ ಹಣತೆಯ ನಿಕ್ಕಿ ।
ಯೋಗ ಜ್ಯೋತಿಯ ಬೆಳಗಿ । ಪ್ರೇರಣೆಯೇ ನಲಿದು ॥ ೨ ॥

ವಿಜ್ಞಾನ ಯುಗದಲ್ಲಿ । ಸುಜ್ಞಾನ ಮಾರ್ಗವಲಿ ।
ಸರ್ವಜ್ಞ ನೀನೆನ್ನನು । ನಡೆಯಿಸಲು ಬೇಗದಲಿ ॥ ೩ ॥

ನನ್ನಾಸೆ ಜೀವನಕೆ । ಮುನ್ನಾಸೆ ಮನಕೆ ।
ಅನ್ಯಾಯದಧೋಗತಿಯು ಬೆನ್ನು ಬಿದ್ದಾಕಾಲದಲಿ ।
ಶಾಂತಿ ಎನುತಿರಲಿಲ್ಲವು ॥ ೪ ॥

ಜೀವನದಿ ಗುರಿಯಿರಲಿಲ್ಲ । ಬಾಳಿನಲಿ ಬೆಳಕಿರಲಿಲ್ಲ ।
ಬದುಕಿನಲಿ ಲೇಸೆನಿತು ಸುಖವಿರಲಿಲ್ಲವಾ ಸಮಯದಲಿ ॥ ೫ ॥

ಕಾಶಿ ಕ್ಷೇತ್ರ ಸ್ಥಾನಕೆ । ಪವಿತ್ರ ಜ್ಞಾನ ಪೀಠಕೆ ।
ಇಹ-ಪರ ಸುಖಸ್ಥಲಕೆ । ಕಾಲವನು ಸರಿಸಿ ಇರಿಸದೆ ।
ಪ್ರೇರಣೆಯೇ ಮಾರ್ಗ ತೋರಿಸಿದೆ ॥ ೬ ॥

ನೀನು ಬಿತ್ತಿದ ಬೀಜ । ನೀನು ಬೆಳಸಿದ ನೆನಹು ।
ನೀನು ಪ್ರೇರಿಸಿಥ ಕೋಟಿಜಪ । ಮಂತ್ರ ಪ್ರೇರಣೆಯ ಬಲದಿಂದೆ ॥ ೭ ॥

ಸಾಂತ್ವನುದುಃಖವ ನೆರೆದು । ಭ್ರಾಂತಿ ಕಸವನು ತೆಗೆದು ।
ಶಾಂತಿ ಪುಷ್ಪವನೆಸೆದು । ಪ್ರಗತಿ ಫಲವೀಯೆ! ಆತ್ಮ
ಕೃಪೆದೋರಿದೆ ಪ್ರೇರಣೆಯೆ ॥ ೮ ॥

ಶಿವನ ಧ್ಯಾನವನೆಲಿಸು । ಶಿವನ ಸೇವೆಯಲಿರಿಸು ।
ಜವದಲೆನ್ನಯ ನಡೆ-ನುಡಿಗಳನು ।
ಮುದದಿ ಪರಿಶುದ್ಧಗೊಳಿಸು ಪ್ರೇರಣೆಯೇ || ೯ ||

ಸಮಷ್ಟಿ ಸಮಭಾವದಲಿ ।
ಸತ್ಕಾರ್ಯವನನುಗ್ರಹಿಸು ।
ಮಮಕಾರ-ಅಹಂಕಾರ ।
ಸಂಹರಿಸಿ ಸಲುಹಿ ।
ಚಿರನಿಲಯದೊಳಿರಿಸು ಪ್ರೇರಣೆಯೇ || ೧೦ ||

---

[ಈ ಕವನವು ಮೇಲ್ನೋಟಕ್ಕೆ ಪ್ರೇರಣೆಯನ್ನು ಕುರಿತು ಇರುವದಾದರೂ ಇಲ್ಲಿ ಈ ಪ್ರೇರಣೆ ಕೆಲವಂಶದಲ್ಲಿ ಮೊಮ್ಮಗಳೇ ಆದರೂ ಬಹ್ವಂಶದಲ್ಲಿ ತಮ್ಮ ಆತ್ಮೋದ್ಧಾರಕ್ಕಾಗಿ ತಮ್ಮ ಆತ್ಮ ಶಾಂತಿಗಾಗಿ ವಿಶ್ವದ ಸತ್-ಚಿತ್ ಶಕ್ತಿಯನ್ನು ಶ್ರೀ. ಶಿವಲಿಂಗಪ್ಪನವರು ಆವ್ಹಾನಿಸಿರುವರು. ಈ ಆವ್ಹಾನಕ್ಕೆ ಓಗೊಟ್ಟು ಆಧ್ಯಾತ್ಮದ ಪ್ರಸಾದವು ಶ್ರೀ. ಶಿವಲಿಂಗಪ್ಪನವರ ಆತ್ಮವನ್ನು ಸಂಧಿಸಿ ಅವರಿಗೆ ಮಾನಸಿಕ ಆತ್ಮಿಕಶಾಂತಿಯನ್ನು ದಯಪಾಲಿಸಿದೆ ಎಂದು ಈ ಕವನದಿಂದ ನಾನು ತಿಳಿಯುತ್ತೇನೆ.]

---

## ನನ್ನವರಿಗಾಗಿ — ೧೬

### ನೀನು ಆಡುವ ಮಾತು ಹೀಗಿರಲಿ ಪ್ರೇರಣೆಯೇ

ವಚನದಲಿ ನಿನ್ನಯಾ ಪ್ರೇರಣೆಯು ತುಂಬಿದೊಡೆ ।
ಹೃತ್ಕಮಲವರಳಿ ತಾ ಸೌರಭವ ಬೀರುವದು || ೧ ||

ನೀನು ಆಡುವ ಮಾತು ಹೀಗಿರಲಿ ಪ್ರೇರಣೆಯೆ ।
ಮೃದು ವಚನ ಮೂಲೋಕ ಗೆಲ್ಲುವದು ತಿಳಿಯೇ || ೨ ||

ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ ।
ಮೊಗ ಮುಗುಳ್ನಗೆಯ ಗಂಧ ಘಮ ಘಮಿಸುತಿರಲಿ || ೩ ||

ಮುಂಜಾವಿನಲಿ ಹಸಿರು ಹುಲ್ಲಮುಕುಮಲ್ಲಿನಲಿ ।
ಪಾರಿಜಾತವು ಹೂವ ಸುರಿಸುವಂತಿರಲಿ.... || ೪ ||

ಮೆಲ್ನಡೆಯು ಸವಿಯೊಲುಮೆ ಕರಗಿ ಕಂಬನಿಯಾಗಿ ।
ಹೆಣ್ಣ ಕಣ್ಣಂಚಿನಲಿ ಹೊಳಪು ತುಳುಕುವಂತಿರಲಿ || ೫ ||

ಸುಳಿಗಾಳಿ, ಗಾಳಿಯೊಂದಿನಿತು ಸೂಸಿ ಬಂದರು ಸಾಕು
ಮರವನಪ್ಪಿದ ಹೂಬಳ್ಳಿ ಬಳಕುವಂತಿರಲಿ... || ೬ ||

ತವ ಜನಕ ಮೋನಕ್ಕನ ಮನೆ ಮಧುರಗೊಳಿಸುತ |
ವಾಣಿ ವೀಣೆಯ ನಾದ ವಾತ್ಸಲ್ಯಗೊಳಸುವಂತಿರಲಿ... || ೭ ||

ನಿನ್ನ ವಾಙ್ಮಯ ಕಾಶಿಯಲಿ ಅಣ್ಣನ ಕಿವಿಗಿಂಪಾರಲಿ |
ಹೃದಯದಿಂ ಹರುಷ ಹೊರಸೂಸುವಂತಿರಲಿ... || ೮ ||

ಗದ್ಯಕಾವ್ಯ || ಮಾತೆ ಮಮತೆ ಮೂಡಿಸಿತು, ಮಮತೆಯಿಂದ ಮೂಡಿದ |
ಮಾತುಗಳೇ ಮುತ್ತಾದವು, ಮಾನವ ಮುತ್ತಿನಂತಹ |
ಮಾತುಗಳನ್ನು ಮಾರ್ಪಡಿಸುತ್ತ ಮಾಣಿಕ್ಯವನ್ನಾಗಿ ಮಾಡಿದ |
ಮಾತಿಗೆ ಮಾಣಿಕ್ಯದ ಮಾನಕೊಟ್ಟು ಮಾನವ ಮಹಾತ್ಮನಾದ |
ಮಹಾತ್ಮನು ನಿಜ ಮಮತೆ (ಭಕ್ತಿ)ಯ ಬೆಂಬಲದಿಂದ |
ಪರಮಾತ್ಮನ ಧ್ಯಾನದೊಳ್ ಲೀನನಾಗಿ ಜೀವನ್ಮುಕ್ತನಾದ || ೯ ||

---

[ ಈ ಕವನವಾದರೂ ಕುಮಾರಿ ಪ್ರೇರಣೆಯನ್ನೇ ಕುರಿತು ಕಟ್ಟಲಾಗಿದೆ. ಮಿಗಿಲಾದ ಮಮತೆ ಮನದಲಿ ಮೂಡಿ ಮಲೆತು ಮರೆಯುತಿರೆ ಅಜ್ಜನು ಮೊಮ್ಮಗಳ ಸವಿಯ ನಲುನುಡಿಯಲಿ ಕಂಡು ಅರಿತು ಉಂಡ ನಲಿವು ಒಲವು ಇಲ್ಲಿ ಈ ಕವನದಲ್ಲಿ ಮೈದೋರಿ ಮಧುರವಾಗಿ ಘಮಘಮಿಸುತ್ತಿದೆ.

೮ನೆಯ ನುಡಿಯಲ್ಲಿಯ "ಕಾಶಿಯಲಿ ಅಣ್ಣ" ಇನ್ನಾರೂ ಅಲ್ಲ, ಶ್ರೀ ಶಿವಲಿಂಗಪ್ಪನವರೇ [

---

## ನನ್ನವರಿಗಾಗಿ—೧೭

### ಚಿತ್ರಮಯ ಪತ್ರವಿದು

(ಚಿತ್ರಮಯ ಪತ್ರದ ಚಾರಿತ್ರ್ಯವು ಮೋಡದ ಸಲುವಾಗಿ ಹಂಬಲಿಸುವ ಜಾತಕ ಪಕ್ಷಿಯಂತೆ, ಚಕೋರನಿಗೆ ಚಂದ್ರಮನ ಅಭಿಲಾಷೆಯಂತೆ, ಆಳವಾದ ಅಳತೆಗೋಲಿನಿಂದ ಅಳೆಯಲಾರದಷ್ಟು ಆನಂದವಾಯಿತು.)

ಚಿತ್ರಮಯ ಪತ್ರವಿದು | ಬಹುಗಾತ್ರ ವಿಚಾರವದು |
ಸೂತ್ರಧಾರ ಯೋಚಿಸಿದುದು | ಪಾತ್ರ ಪ್ರತಿಭೆ "ಅಕ್ಕ"ನದು || ೧ ||

ಕೃತಿಯಲ್ಲಿ ಕರುಣೆಯು | "ಕಲ್ಪನೆ" ಯಲಿ ಸ್ಫೂರ್ತಿಯು |
ಸ್ಮೃತಿಯಲ್ಲಿ "ಪ್ರೇರಣೆ" ಯು | "ಚೇತನೆ"ಯು ಧೃತಿಯಲ್ಲಿ || ೨ ||

ಉಕ್ಕಿ ಬರುತಿಹ ಔದಾರ್ಯ | ಮಾಧುರ್ಯ ಕಕ್ಕುಲತೆಯುದು |
ಚೊಕ್ಕ ಜೀವನ ಸೌಂದರ್ಯ | ತಕ್ಕ ಚಾತುರ್ಯ ಶಿವಣ್ಣನದು || ೩ ||

"ಮೋನಕ್ಕ"ನ ಮನೋದಯ | ಮಿನುಗುತಿಹುದು ಶಾಂತಿಮಯ |
ಲೀನಭಾವ ಭಾಗ್ಯೋದಯ | ಘನ ಮಾತೃ ಮಹಿಮೆಯ || ೪ ||

ಒಮ್ಮನವ ಒಡನಾಡಿಗಳ | ಉತ್ತೇಜನದ ಉಮೇದಿಯೊಳ್ |
ಉಳಿದಿಹುದು "ಉದಕಮಂಡಲ" ದೊಳ್ | ಪ್ರೇಮಾತ್ಮನ
ವಂದನೆಗಳು || ೫ ||

---

[ತಮ್ಮ ಮೊಮ್ಮಗಳ ಕೈಬರೆಹದ ಪತ್ರವೊಂದು ಬೇಕೆನಿಸಿತು ಶ್ರೀ ಶಿವಲಿಂಗಪ್ಪನವರಿಗೆ. ವಿಜಾಪುರಕ್ಕೆ ಕಾಗದ ಬರೆದರು. ಆ ಕಾಗದವನ್ನು ನೋಡಿಕೊಂಡು ಶ್ರೀ ಶಿವಲಿಂಗಪ್ಪನವರ ಚಿರಂಜೀವರಾದ ಶ್ರೀ ಶಿವಣ್ಣನವರು ತಮ್ಮ ಅಕ್ಕನ ಮಗಳಿಗೆ ಪತ್ರವನ್ನು ಬರೆಯಲು ಹೇಳಿ-ದರು. ಅಕ್ಷರಾತೀತವಾದ ಚಿತ್ರ-ವಿಚಿತ್ರ ರೇಖೆಗಳ ಚಿತ್ರಮಯ ಪತ್ರವೊಂದನ್ನು ಬರೆದು ಮಗು ತಂದುಕೊಡಲಾಗಿ ಶ್ರೀ ಶಿವಣ್ಣನವರು ಅದನ್ನು ಕಳಿಸಲಾಗಿ, ಶ್ರೀ ಶಿವಲಿಂಗಪ್ಪನವರು ಆ ಚಿತ್ರಮಯ ಪತ್ರವನ್ನು ಕಂಡು ಕಕ್ಕುಲತೆಯಿಂದ ನಲಿಯುತ್ತಾ ಕಟ್ಟಿದ ಕವನವಿದು. ಇದರಲ್ಲಿ ಕರುಣೆ, ಕಲ್ಪನೆ, ಪ್ರೇರಣೆ, ಚೇತನೆ, ಮೋನಕ್ಕ, ಶಿವಣ್ಣ ಈ ಎಲ್ಲ ತಮ್ಮ ಕುಟುಂಬದವರ ಹೆಸರುಗಳನ್ನು ಹೆಣೆದು ಕವನವನ್ನು ಕಟ್ಟುತ್ತಿರುವಾಗ "ಉದಕಮಂಡಲ"ದಲ್ಲಿದ್ದ ಶ್ರೀ ಶಿವ-ಲಿಂಗಪ್ಪನವರು ತಮ್ಮ ಕುಟುಂಬದವರೆಲ್ಲರ ಮಧ್ಯದಲ್ಲಿ ಕುಳಿತು ಎಲ್ಲರ ಜೊತೆಯಲ್ಲಿ ನಗುತ್ತಾ ಕಲೆಯುತ್ತಾ ಸೊಗಸು ಮಾಡಿದಂತೆ ಹರುಷವನ್ನು ಅನುಭವಿಸಿರಲು ಸಾಕು.]

---

## ನನ್ನವರಿಗಾಗಿ—೧೮

### ಅಕ್ಕನ ಪತ್ರವೆನೆ ನಮಗೊಂದು ಆನಂದ

ಅಕ್ಕನ ಪತ್ರವೆನೆ ನಮಗೊಂದು ಆನಂದ |
ಉಕ್ಕಿಬಂದಿಹ ಭಾವ ಸರಸ ವಿನೋದಕೆ ಚಂದ ||
ಚಿಕ್ಕ ಅಕ್ಕರಗಳ ಚೆಕ್ಕೆಯ ಚಿನ್ನ ತೋರುತ್ತ |
ಅಕ್ಕರೆಯ ತಮ್ಮನ ಆನಂದದಿ ನಗಿಸುತ್ತ... || ೧ ||

ತಿಂಗಳೆರಡಾಯ್ತು ತಂಪಿನೊಳ್ ತನ್ಮನಾನಂದ |
ಅಂಗ ಆರೋಗ್ಯದಿಂದ ಅಡ್ಡಾಡುವದು ವಿಸ್ವಾಸದಿಂದ ||
ಬಡವ-ಬಲ್ಲಿದರೆಂಬ ಭೇದವ ನೂಕುತ |
ನಾಡು ನಗರಗಳ ಪರಿಸ್ಥಿತಿಯ ನರಿಯುತ.... || ೨ ||

ಕೂಡಿಕೊಂಡಿಟ್ಟನುಭವದ ಮನನ ಮಾಡುತ್ತ |
ರೂಢಿಗನುಸರಿಸಿ ಅಕ್ಕಗೆಓಲೆ ಬರೆಯುತ್ತ ||
ಪ್ರೌಢವಾದ ಹತ್ತುಮುಖದ ಅನುಭವವರಿಯುತ್ತ |
ಪಡುವ ಮೋಹ ಮಾಯದಾಶೆಯಾ ನೀಗುತ್ತ.... || ೩ ||

ಉತ್ತಮ ಜನಕೆ ವಂದನೆಗೈಯುತ್ತ |
ಸತ್ಯ-ಸಹಕಾರ ಸಂಗ್ರಹಿಸುವದು ನಮ್ಮ ಸೊತ್ತು |
ಅತ್ಯಧಿಕ ಅಕ್ಕನಾಜ್ಞೆಯನು ಪಾಲಿಸುತ್ತ |
ಉಚ್ಚ ಉನ್ನತ ರೀತಿ ನೀತಿಗಳನರಿಯುತ್ತ || ೪ ||

ಮುದ್ದು ಪ್ರಕಾಶ, ಪ್ರತಿಭೆ, ಚೇತನೆಯ ನೆನೆಯುತ್ತ |
ಶುದ್ಧಭಾವದಿ ಒಲುಮೆಯೊಳ್ ನಿರುಕಿಸುತ ನಿಮ್ಮತ್ತ ||
ಉದಕಮಂಡಲದೊಳಿದ್ದು ಬರುತಿಹೆವು ಊರಿನತ್ತ |
ವೃದ್ಧರಾದ ಒಡನಾಡಿಗಳಿಗೆ ನಮಿಸುತ್ತ || ೫ ||

---

[ ಇಂಥದೇ ಇನ್ನೊಂದು ಪತ್ರವನ್ನು ಕುರಿತು ಬರೆದ ಕವನವಿದು. ಊರನ್ನು ಬಿಟ್ಟು ದೇಹಾರೋಗ್ಯವನ್ನು ಮತ್ತು ಮಾನಸಿಕ ಶಾಂತಿಯನ್ನು ಸಾಧಿಸುತ್ತಾ ನಾಡು-ನಗರಗಳ ಪರಿಸ್ಥಿತಿಯನರಿಯುತ್ತಾ, ಹತ್ತುಮುಖದ ಅನುಭವ ಪಡೆಯುತ್ತಾ, ಮೋಹಮಾಯದಾಶೆಯ ನೀಗುತ್ತಾ ಅಲ್ಲಲ್ಲಿ ಅಲೆದಾಡುತ್ತಿರುವಾಗಲೂ "ಉದಕಮಂಡಲ"ದಲ್ಲಿರುವ ಶ್ರೀ ಶಿವಲಿಂಗಪ್ಪನವರಿಗೆ ಅಕ್ಕನ ಪತ್ರದ ಮೋಹಮಾಯೆ ಮಾತ್ರ ಬಿಡದು ! ಈ ಕವನದಲ್ಲಿ ಮುದ್ದು, ಪ್ರಕಾಶ, ಪ್ರತಿಭೆ, ಚೇತನೆ ಮುಂತಾದ ತಮ್ಮ ಕುಟುಂಬದವರ ಹೆಸರುಗಳನ್ನು ಬಾಯಿತುಂಬುವಂತೆ, ಮನಮೆಚ್ಚುವಂತೆ ಹೃದಯಕ್ಕೆ ಹರುಷವಾಗುವಂತೆ ಜೋಡಿಸಿ ಕಟ್ಟಿ ಶ್ರೀ ಶಿವಲಿಂಗಪ್ಪನವರು ನಲಿದು ತಣಿದಿರುವರು. ]

---

## ನನ್ನವರಿಗಾಗಿ—೧೯

### ದಾರಿ ತೋರಲು ಮಾತ್ರ ನೀನೆ ಬೇಕು

ದಿಗ್ದೇಶದಾಚೆಯಲಿ | ಆದರ್ಶ ಗುರಿಯಿರಲಿ ||
ಸಾಧಿಸುವ ಕೆಚ್ಚಿರಲಿ | ಅನಿತೆ ಸಾಕು ||
ದಾರಿ ತೋರಲು ಮಾತ್ರ, ನೀನೆ ಬೇಕು || ೧ ||

ಕತ್ತಲಲಿ ಕಡಲಿರಲಿ | ಎನಿತಗಲವಾಗಿರಲಿ |
ಈಜುವ ಬಲವಿರಲಿ | ಅನಿತೆ ಸಾಕು |
ಬೆಳಕು ಹಿಡಿಯಲು ಮಾತ್ರ | ನೀನೆ ಬೇಕು | || ೨ ||

ಸಮರ ಘೋರವೆ ಇರಲಿ । ಸೈನ್ಯರವವೆನಿತಿರಲಿ ।
ಬಿಲ್ಲು ಶರ ಕೈಲಿಹವು । ಅನಿತೆ ಸಾಕು ।
ರಥವ ನಡಿಸಲು ಮಾತ್ರ ನೀನೆ ಬೇಕು ॥ ೩ ॥

ಶರಧಿ ಮೊರೆದೆದ್ದಿರಲಿ । ಬಿರುಗಾಳಿ ಬೀಸಿರಲಿ ।
ಕಿರಿನೌಕೆಯೊಂದಿರಲು । ಅನಿತೆ ಸಾಕು ।
ಸೂತ್ರವಾಡಿಸೆ ಮಾತ್ರ ನೀನೆ ಬೇಕು ॥ ೪ ॥

ಬೆಟ್ಟ ಕಡಿದಾಗಿರಲಿ । ಮುಳ್ಳು ಕಂದರವಿರಲಿ ।
ಹತ್ತುವಾ ಬಲವಿರಲು ಅನಿತೆ ಸಾಕು ।
ದಣಿವ ಕಳೆಯಲು ಮಾತ್ರ ನೀನೆ ಬೇಕು ॥ ೫ ॥

ಎದೆ ಬಿರಿವ ವನವಿರಲಿ । ಉರಿ ಬಿಸಿಲು ಸುರಿದಿರಲಿ ।
ಧೃತಿಗೆಡದ ಮತಿಯಿರಲು । ಅನಿತೆ ಸಾಕು ।
ದಾಹಶಾಂತಿಗೆ ಮಾತ್ರ । ನೀನೆ ಬೇಕು ॥ ೬ ॥

ಜಗದ ಜನ ಜರಿತಿರಲಿ । ಜಠರ ಉರಿ ಉರಿತಿರಲಿ ॥
ಜನ್ಮ ಮುಕ್ತತೆಗೊಳಲು । ಅನಿತೆ ಸಾಕು ।
ಜೀವಾತ್ಮನ ಮುಕ್ತಿಯಲ್ಲಿರಿಸಲು । ನೀನೆ ಬೇಕು ॥ ೭ ॥

ಮೋಹವಲಿ ಮುಳುಗಿರಲಿ । ಮನದೊಳಗೆ ಮಾಯಿರಲಿ ।
ಮಮಕಾರ ತೊರೆದಿರಲು । ಅನಿತೆ ಸಾಕು ।
ಮಾನವನನುದ್ಧರಿಸಲು । ನೀನೆ ಬೇಕು ॥ ೮ ॥

ಬಂಧುಗಳು ಬಿಟ್ಟರಲಿ । ಭವಬಾಧೆ ಸಂಧಿಸಲಿ ।
ಭಾವ ಶುದ್ಧ ಉಳಿಯಲು । ಅನಿತೆ ಸಾಕು ।
ಭವಶರಧಿ ದಾಟಿಸಲು । ನೀನೆ ಬೇಕು ॥ ೯ ॥

ಸ್ವಸಮಾಜ ಹಿತದಲ್ಲಿ । ಐಕ್ಯ ಅರ್ಥಿಕ ಬಲದಿ ।
ಜಡೆಯ ಶಂಕರ ಬ್ಯಾಂಕಿರಲಿ । ಅನಿತೆ ಸಾಕು ।
ಜವದಿ ಉನ್ನತಿಗೊಳಿಸೆ । ನೀನೆ ಬೇಕು ॥ ೧೦ ॥

ಜನ್ಮ ಶತವೆನಿತಿರಲಿ ಎಡರು ಬಲೆ ಬೀಸಿರಲಿ ।
ನಿನ್ನ ಧ್ಯಾನವು ಇರಲಿ । ಅನಿತೆ ಸಾಕು ।
ಜನ್ಮ ಜನ್ಮಕು ಮಾತ್ರ । ನೀನೆ ಬೇಕು ॥ ೧೧ ॥

ಸೇವೆಯಲಿ ಶಿವಯೋಗಿರಲಿ | ಸೇವಾನುಕೂಲೆ ಕರುಣಾದೇವಿರಲಿ |
ಸರ್ವಾತ್ಮಗಳ ಸಹಕರಿಸಲು | ಅನಿತೆ ಸಾಕು |
ಸರ್ವತ್ರ ಸುಖದೊಳಿರಿಸಲು | ನೀನೆ ಬೇಕು || ೧೨ ||

ಮಾಸುತಾ ತಾಯಿರಲಿ ಪ್ರೇಮ ನೀಲಳು ತಂಗಿರಲಿ |
ಪ್ರೇರಣೆ ಪ್ರಕಾಶದೊಳಿರಲು | ಅನಿತೆ ಸಾಕು |
ಪ್ರಾಣಿ ಮಾತ್ರರನು ರಕ್ಷಿಸಲು | ನೀನೆ ಬೇಕು || ೧೩ ||

ಮೌನಿ ಶಂಕ್ರಮ್ಮಿರಲಿ | ಮಿನುಗಲಿ ರಾಜಕ್ಕೆಲ್ಲರಲಿ |
ಮಾತೆ ಬಂಗಾರೆಮ್ಮನ ಬಳ್ಳಿ ! ಅನಿತೆ ಸಾಕು |
ಪ್ರಾಣಿ ಮಾತ್ರರನು ರಕ್ಷಿಸಲು ನೀನೆ ಬೇಕು || ೧೪ ||

ಕಾಶಿಯಲಿರುತಿರಲಿ ಕಾಮಾರಿ ಕೈ ಹಿಡಿದಿರಲಿ |
ಕೋಟಿ ಶಿವಧ್ಯಾನದೊಳಿರಲು | ಅನಿತೆ ಸಾಕು |
ಕೈಲಾಸದೊಳಿರಿಸಲು | ನೀನೆ ಬೇಕು || ೧೫ ||

---

[ ಈ ಕವನ ಸಂಗ್ರಹದಲ್ಲಿಯ ಕೆಲವು ಉಚ್ಚ, ಉದಾತ್ತ ಮತ್ತು ಉತ್ಕೃಷ್ಟ ಕವನಗಳಲ್ಲಿ ಇದೊಂದು. ಪ್ರಪಂಚದಲ್ಲಿ ಕಷ್ಟನಿಷ್ಠುರಗಳೇನೇ ಬರಲಿ, ಎಡರುತೊಡರುಗಳೇನೇ ಕಾಲ್ತೊಡಕಾಗಲಿ, ಹೋರಾಟಭೋರಾಟಗಳೇನೇ ಅರ್ಘಟಿಸಲಿ, ಬಾಳಿನ ಗುರಿಯ ಸಾಧಿಸಲು ಬಾಹುಗಳಲ್ಲಿ ಬಲವಿರಲಿ, ಮನದಲ್ಲಿ ಧೈರ್ಯವಿರಲಿ, ಹೃದಯದಲ್ಲಿ ಸ್ಥೈರ್ಯವಿರಲಿ, ಪುರುಷಾರ್ಥ ಸಾಧಿಸಲಿ, ಆದರೆ ಭಗವಂತನ ಪ್ರಸಾದ ಬೇಕೇ ಬೇಕು. ಮಾನವನ ಪುರುಷಾರ್ಥ ಮತ್ತು ದೇವನ ಪ್ರಸಾದ ಇವೆರಡೂ ಬೇಕು, ಜೀವನದಲ್ಲಿಯ ಅನಂತ ಆನಂದಕ್ಕೆ, ಅನಂತ ಶಾಂತಿಗೆ, ಆತ್ಯಂತಿಕ ಯಶಸ್ಸಿಗೆ. ಈ ಧೀರೋದಾತ್ತ ಮಂತ್ರವು ಅಡಕವಾಗಿದೆ ಈ ಕವನದಲ್ಲಿ.

ಮಗ ಶಿವಯೋಗಿ,ಸೊಸೆ ಕರುಣಾದೇವಿ,ಹೆಣ್ಣು ಮಕ್ಕಳು ಮೂವರು ಮೋನಕ್ಕ,ಶಂಕರೆಮ್ಮ, ರಾಜಕ್ಕ, ತಂಗಿ ಪ್ರೇಮನೀಲಳು, ಮೊಮ್ಮಕ್ಕಳು ಪ್ರೇರಣೆ ಪ್ರಕಾಶ—ಎಲ್ಲರೂ ಇರಲಿ, ಆದರೆ ಅವರೆಲ್ಲರನ್ನೂ ಪ್ರಾಣಿ ಮಾತ್ರರೆಲ್ಲರನ್ನೂ ರಕ್ಷಿಸಲು, ಎಲ್ಲರನ್ನು ಸುಖದಲ್ಲಿರಿಸಲು, ಭಗವಂತನ ಪ್ರಸಾದವೇ ಬೇಕು ಎಂದು ಕವನಕಾರರು 'ಕಾಮಾರಿ ಕೈಹಿಡಿದಾಗಲೂ' ಕಾಶಿಯಲ್ಲಿ ಈಶ ಧ್ಯಾನದಲ್ಲಿ ಲೀನರಾದಾಗ ಈ ಉದಾತ್ತ ಮಂತ್ರದ ದಿವ್ಯಜ್ಯೋತಿ ಅವರ ಆತ್ಮದಲ್ಲಿ ಬೆಳಗಿತು. ಆ ಜ್ಯೋತಿಯು ಬೆಳಗುತಿಹ ಬೆಳಕೇ ಈ ಕವನ. ]

---

## ನನ್ನವರಿಗಾಗಿ—೨೦

### ಹೋಗಿಬರುವೆನು ನನ್ನ ಹರಸಿರಿಂದು

ಜೀವಾತ್ಮನಂತ್ಯಕ್ಕೆ ಚಿರಶಾಂತ ನಿಲಯಕ್ಕೆ ।
ಹೋಗಿ ಬರುವೆನು ನನ್ನ ಹರಸಿರಿಂದು ॥
ಜಡೆಯ ಶಂಕರಲಿಂಗ ಕರೆಯುವಾ ಕಾಲಕ್ಕೆ ।
ಅಪ್ಪಣೆಯ ಕೊಡಿರೆನಗೆ ನಗುತ ಬಂದು ॥ ೧ ॥

"ಕಾಶಿ" ವಾಸದಿಂದ ಈಶನೆಡೆಗೆ ಪೋಗುವೆನು ।
ಶ್ರೀ ಶಂಕರಲಿಂಗನಾಜ್ಞೆಯ ಮೀರಿ ನಿಲ್ಲಬಹುದೇ ? ॥
ಕಂಬನಿಯ ಕರೆಯದಿರಿ ಮನದಲ್ಲಿ ಮರುಗದಿರಿ ।
ಅಂತ್ಯದೊಳೆಲ್ಲರ ಶಿವಭಾವ ಮೊಗ ಕಂಡು ನಲಿವೆ ॥ ೨ ॥

ಒಪ್ಪಿಸಿರುವೆ ನಾ ನಿಮಗೀಗಾಲೇ ಮನೆಯ ಹಿರಿತನವ ।
ಸಮತತ್ವದೊಳು ನೀವು ಸಾಗುತಲಿನ್ನು ॥
ಮನೆಯ ಮಾನವನುಳಿಸಿ ಹಿರಿಯ ಕೀರ್ತಿಯ ಗಳಿಸಿ ।
ಸುಖಿಸಿರಿ ಸರ್ವಾತ್ಮಿಗಳೇ ಸಜ್ಜನರ ತೆರದಿ ॥ ೩ ॥

ಹೊರದೃಷ್ಟಿ ಹೊರತಾಗಿ ತಿಳಿದೃಷ್ಟಿಗೊಂದಾಗಿ ।
ಜೀವನದ ಜಡ-ಆತ್ಮ ಮುಕ್ತತೆವುಳ್ಳವರಾಗಿ ॥
ಶಿವಜೀವಗಳೊಂದಾಗಿ ಜಡದೇಹ ಹೊರತಾಗಿ ।
ಈ ಸೃಷ್ಟಿರಂಗದೊಳು ಜ್ಯೋತಿರ್ಲಿಂಗ ಮಯವಾಗಿ ॥ ೪ ॥

ನಾ ನಿಮ್ಮಾತನೆಂದರಿದು ಶುಭ ನೆರವನೀಡಿದಿರಿ ।
ಸರ್ವಾತ್ಮಗಳನು ಸಂಸಾರ ಮುಕ್ತತೆಯಲಿ ಸ್ಮರಿಸದಿರಲಾರೆ ॥
ಸಕಲರಿಗೆ ಋಣಿಯಾಗಿರುವ ಈ ಜೀವಾತ್ಮನನು ।
ಶುಭಕೋರಿ ಕಳುಹಿರಿ ಅಂತ್ಯದಲೆನ್ನನು ದೇವನೆಡೆಗೆ ॥ ೫ ॥

ಬಾಳುವೆಯ ಬನಕಿಂದು ಮುಸುಕಿರುವ ಮಾಗಿತಾ ।
"ಅರಿವು—ಮರೆವೆ"ಗಳ ಆಟ ಆಡುತಿದೆ ನೋಡಿ ನೋಡಿ ॥
ಸಾಗಿ ಬರುತಿಹುದಿಲ್ಲಿ ಶಿವಚಿತ್ತದುಲ್ಲಾಸದೊಳ್ ।
ಚಿತ್ತದಲಿ ಚಿಮ್ಮುತಲಿ ಮಮ ಮುಕ್ತಿ ಸಿರಿಯು ॥ ೬ ॥

ಆತ್ಮಬನಸಿರಿಯ ಕುಸುಮಗಳು ನೀವಾಗಿ |
ಹೋರಾಡಿ ಬಾಳಿನ ಕಹಿ ಸಿಹಿಯ ಸವಿ ಸವಿದು ||
ಆತ್ಮ ಸಾಕ್ಷಾತ್ಕಾರಗೊಳ್ಳುತಲಿ ಶಿವಭಾವ ಸೂಸುತಲಿ |
ಪರಮ ಪರತರ ಶ್ರೇಷ್ಠ ಶಿವಕಳೆಯ ಬೀರಿ || ೭ ||

ಜಡದೇಹವಳಿದರೂ ಆತ್ಮವಮರವದಲ್ತೆ ! |
ಮೋಹ ಪರದೆಯ ಹರಿದು ತಿಳಿದು ನೋಡು ||
ಕಳವಳ ಕಳೆದು ಜ್ಞಾನಜೇನು ಸುರಿಸಿರಿ ನೀವು |
ನನ್ನಾಶೆಯನು ಸಲಿಸಿ ನಮಿಸುವೆನು ನಿಮಗೆ || ೮ ||

ಕಾಯದ ಕತ್ತಲೆಯ ಕಳೆದು ಬೆಳಕು ತಾ ಕೊಡುವ |
ಕೋಟಿ "ಶಿವಮಂತ್ರ" ಧ್ಯಾನದ ಮನನದೊಳಿರುವ ||
ಜೀವದೊಳು ಈ ಆತ್ಮಜ್ಯೋತಿ–ಪ್ರಕಾಶದೊಳರಿಸುವ |
ಶಿವಭಾವದಿ ಲೀನವಾಗಿ ಅಮರವಾಗುಳಿಯುವೆ || ೯ ||

ಕಡಲೊಳ್ ನದಿಸೇರಿದಂತೆ,
ಪತಿಯ ಆತ್ಮದಲಿ ಸತಿ ಪ್ರೇಮ ಬೆರದಂತೆ,
ಪರಮ ಪರತರ ಶ್ರೀ ಜಡೆಯ ಶಂಕರಲಿಂಗದೊಳು ಬೆರೆತು ಬೇರಿಲ್ಲದಂತೆ,
ಸಮರಸಗೊಂಡು ಬೆರೆವ ಮುನ್ನ, ನಿಮ್ಮೆಲ್ಲರನ್ನೊಮ್ಮೆ ನೆನೆದು

ನಿಮ್ಮ ಋಣಭಾರವನಿಳಿಸಿಕೊಂಡು,
ಕ್ಷಣಿಕ ಹಂಬಲದಿಂದ ಒಂದೆರಡು ನಲ್ ನುಡಿಗಳ ನುಡಿದಿರುವೆ.
ನುಡಿದಂತೆ ನಡೆದು ಜಗದಾಣ್ಮ ಶ್ರೀ ಜಡೆಯ ಶಂಕರನ
ಅಡಿಗೆ ಹೊರತಾಗದಂತೆ ನಡೆಯುವಿರೆಂದು ನಂಬಿರುವೆ.

ಇಂತು ನನ್ನ ಪರಮ ಸಂದೇಶ !
ನಿಮ್ಮೆಲ್ಲರಿಗೂ, ಸಕಲ ಜೀವಾತ್ಮಗಳಿಗೂ,
ಪಂಚಭೂತಾತ್ಮಗಳಿಗೂ ನನ್ನ ಅನಂತ ವಂದನೆಗಳು ||

|| ಓಂ ! ತತ್–ಸತ್ ||

---

[ ದೇಹಾರೋಗ್ಯಕೆಂದು, ಚಿತ್ತಸ್ವಾಸ್ಥ್ಯಕ್ಕೆಂದು ಮತ್ತು ಆತ್ಮಶಾಂತಿಗೆಂದು ಶ್ರೀ ಶಿವಲಿಂಗಪ್ಪನವರು ಕಾಶಿಯಲ್ಲಿ ಕೋಟಿಜಪ, ಲಕ್ಷನಮಸ್ಕಾರ, ಲಕ್ಷನಾಮ ಲೇಖನ, ಈಶಧ್ಯಾನ ಮುಂತಾದ ಸಾಧನೆಗಳಲ್ಲಿ ನಿರತರಾಗಿ ಸುಮಾರು ಎರಡು ವರ್ಷ ಕಾಲ ಕಳೆದರು. ಆಗ

ಒಂದಾನೊಂದು ಸಮಯಕ್ಕೆ ಅವರಿಗೆ ಸಾವು ಸನ್ನಿಹಿತವಾದಂತೆ ಭಾವನೆಯಾಯಿತು. ಆ ಭಾವನೆಯ ಕಾವಿನಲ್ಲಿ ಮೈದೋರಿದ ನಿರ್ಯಾಣ ಸಂದೇಶವು ಈ ಕವನದಲ್ಲಿ ಮೈದಾಳಿದೆ.

ಈ ಕವನವು ಶ್ರೀ. ಶಿವಲಿಂಗಪ್ಪನವರ ಮನಸ್ಸು ಹೃದಯ ಮತ್ತು ಆತ್ಮ ಎಷ್ಟು ಪಕ್ವ-ವಾಗಿವೆ ಎಂಬುದರ ಸಾಕ್ಷಿ. ಈ ಕವನವನ್ನು ಎಷ್ಟು ಸಲ ಓದಿದರೂ ಸಾಕೆನಿಸದು, ಇದನ್ನು ಓದೋದುತ್ತ ಹೋದಂತೆ "Crossing the Bar" ಎಂಬ ಆಂಗ್ಲಕವಿ ಟೆನಿಸನ್ನನ ಕವಿತೆ ನನ್ನ ಕಣ್ಮುಂದೆ ಕಟ್ಟುತ್ತದೆ. ಇದಕ್ಕೂ ಹೆಚ್ಚಾಗಿ ವಿಶ್ವಕವಿ ರವೀಂದ್ರರ "Gitanjali" ಈ ಕವನಸಂಗ್ರಹದಲ್ಲಿಯ ೯೧ ರಿಂದ ೧೦೦ ಕ್ರಮಾಂಕದ ಕವನಗಳು ಕಿವಿಯಲ್ಲಿ ಕೇಳಿದಂತಾಗುತ್ತದೆ, ಸುಳಿದಂತಾಗುತ್ತದೆ. ರವೀಂದ್ರರ "Gardener" ದಲ್ಲಿಯ ಒಂದು ಕವನವನ್ನು ಇಲ್ಲಿ ಅನುವಾದಿಸಿ ಸಲ್ಲಿಸುವ ಮೋಹವನ್ನು ನಾನು ಆವರಿಸಲಾರೆ:

ಹೃದಯ! ಶಾಂತಂ! ಅಗಲುವ ಸಮಯ ಸವಿಯಾಗಲಿ!
ಅದು ಸಾವಲ್ಲ! ಸಂಪೂರ್ಣತೆ!
ನಲ್ಮೆ ನೆನಹಿನಲಿ ನೋವು ಹಾಡಿನಲಿ ಕರಗಿ ಬೆರೆಯಲಿ!
ಆಗಸದಿ ಹಾರಾಡಿದ ಹಕ್ಕಿ ಗೂಡು ಸೇರಿದಂತಾಗಲಿ!
ಸವಿಯಾದ ಸಾವೇ! ಇರುಳಿನ ಹೂವಿನಂತೆ ನಿನ್ನ ಕೈಕುಲುಕು ಮೆದುವಾಗಲಿ!
ನಿಲ್ಲು, ನೀರವವಾಗಿ ನಿನ್ನ ಕೊನೆಯ ಸಂದೇಶವನ್ನುಸಿರು!
ನಮಸ್ತೆ! ನಿನ್ನದಾರಿಯ ಬೆಳಗಲು ನನ್ನ ದೀಪವನೆತ್ತಿಹಿಡಿವೆ!"

ರವೀಂದ್ರರು ಕವಿಯ ಅನುಭಾವಿಯ ದಿವ್ಯದೃಷ್ಟಿಗೆ ಹೊಳೆದುದನ್ನು ಹಾಡಿದರು. ಆದರೆ ಶ್ರೀ ಶಿವಲಿಂಗಪ್ಪನವರ ಈ ನಿರ್ಯಾಣ ಸಂದೇಶದಲ್ಲಿ ಕವಿಹೃದಯದ ಕಾವಿದೆ. ದಾರ್ಶನಿಕನ ದರ್ಶನವಿದೆ, ಜ್ಞಾನಿಯ ಜ್ಞಾನವಿದೆ. ಭಕ್ತನ ಭಕ್ತಿಯಿದೆ. ಸಂಸಾರಿಯ ಸ್ವಾರಸ್ಯವಿದೆ, ಕುಟುಂಬವತ್ಸಲನ ವಾತ್ಸಲ್ಯವಿದೆ. ಧೀರನ ಧೈರ್ಯವಿದೆ.

---

# ಶ್ರೀಶಿವಲಿಂಗಸಂಗತರಂಗ

## ೪

### ಅಂತರಾತ್ಮನಿಗಾಗಿ—೧

**ಕವಿಯಾಗಬೇಕೆಂಬ ಹಂಬಲವು ನನಗೇಕೆ?**

ಕವಿಯಾಗಬೇಕೆಂಬ ಲವಲವಿಕೆ ನನಗೇಕೆ? |
ಕವಿಯಾಗಬೇಕೆಂಬ ಹಂಬಲವು ನನಗೇಕೆ? |
ರವಿ ಕಾಣದುದನು ಕವಿ ಕಾಂಬನೆಂಬಾ |
ಸವಿನುಡಿಯ ಕೇಳಿದೆನು ನಾನೆಷ್ಟೊ ಬಾರಿ……… ॥ ೧ ॥

ಕಂಠ ಸರಿಯಾಗಿಲ್ಲ ನಂಟು ವಾಣಿಯದಿಲ್ಲ |
ಉಂಟೇನು – ನನ್ನಲ್ಲಿ ಬೇರಾವುದಿಲ್ಲ |
ಬಂಟರಾಶ್ರಯವಿಲ್ಲ ನೆಂಟರಾ ನೆಲವಿಲ್ಲ! |
ಕುಂಟ ಕುದುರೆಯು ಸಹಿತ ಕೂಡಲೆನಗಿಲ್ಲ……… ॥ ೨ ॥

ಊರಬಿಟ್ಟಲೆದಿಲ್ಲ ದೂರದರ್ಶಿಯು ಅಲ್ಲ |
ಬೇರಾರ ಗೊಡವೆಗೆ ಹೋದವನು ನಾನಲ್ಲ |
ಯಾರೊಡನೆ ತಿರುಗಿಲ್ಲ ಯಾರ ಪರಿಚಯವಿಲ್ಲ |
ನೂರಾರು ಗ್ರಂಥಗಳ ನಾನೋದಿ ಮುಗಿಸಿಲ್ಲ ॥ ೩ ॥

ವೇದಗಳನರಿತಿಲ್ಲ ಶಾಸ್ತ್ರಗಳ ಸುಳಿವಿಲ್ಲ |
ಓದಿ ಬರೆಯಲು ನನಗೆ ಸಾದವೆಳ್ಳಷ್ಟಿಲ್ಲ |
ಬಾದರಾಯಣ ಕಥೆಯ ನಾ ಕೇಳಿ ತಿಳಿದಿಲ್ಲ |
ಆದರೂ ಕವಿಯಾಗಬೇಕೆಂಬೆನೇ ನಾನು?……… ॥ ೪ ॥

ಕವಿಲಕ್ಷಣಗಳಿಲ್ಲ ನವರಸವನರಿತಿಲ್ಲ |
ನೆವಕಾಗಿ ನಾನೆಂದು ಕವನಗಳ ಬರೆದಿಲ್ಲ |
ಸವಿನುಡಿಯ ಸುಳಿವಿಲ್ಲ ನವದೃಷ್ಟಿ ನನಗಿಲ್ಲ |
ತವಕಿಸಿದೊಡನೆಂತು ಕವಿಯಾಗಬಲ್ಲೆ?……… ॥ ೫ ॥

ಜಾಗರೂಕನು ಅಲ್ಲ ತ್ಯಾಗಿಯೂ ನಾನಲ್ಲ ।
ಭೋಗದೊಡೆವೆಗಳಿಪ್ಪ ಭಾಗ್ಯವಂತನು ಅಲ್ಲ ।
ರಾಗದಾ ರುಚಿಯಿಲ್ಲ ಕೂಗಿನೊಳು ಕಂಪಿಲ್ಲ ।
ಹೇಗಾಗಬಲ್ಲೆನ್ನೈ ನಾನೊಬ್ಬ ಕವಿಯು……… ॥ ೬ ॥

ಉಚ್ಚ ಶಿಕ್ಷಣವಿಲ್ಲ ಹೆಚ್ಚು ನಾ ಕಲಿತಿಲ್ಲ ।
ಅಚ್ಚಗನ್ನಡ ಸಹಿತ ಹೆಚ್ಚು ನಾನರಿತಿಲ್ಲ ।
ಕೆಚ್ಚೆದೆಯು ನನಗಿಲ್ಲ ಸೆಚ್ಚಿದವರಾರಿಲ್ಲ ।
ಹುಚ್ಚೇಕೆ? ಕವಿಯಾಗಬೇಕೆಂಬ ಬಯಕೇಕೆ ॥ ೭ ॥

ರಸದೂಟ ಉಂಡಿಲ್ಲ ರಸಿಕನೂ ನಾನಲ್ಲ ।
ಮುಸುಕಿರುವ ಮಬ್ಬಿನಲಿ ಹೊಸದೇನು ಅರಿತಿಲ್ಲ ।
ದಶದಿಕ್ಕು ಶಶಿತಾರೆ—ಹೆಸರೇನು ಗೊತ್ತಿಲ್ಲ ।
ಹೆಸರಾದ ಹೊಸಕವಿಯು ಆಗುವೆನು ನಾನೆಂತು? ॥ ೮ ॥

---

[ಶ್ರೀ. ಶಿವಲಿಂಗಪ್ಪನವರು ತಾವು ರಚಿಸಿದ ಕೆಲ ಕವನಗಳನ್ನು ಆಪ್ತಮಿತ್ರರೊಬ್ಬರಿಗೆ ತೋರಿಸಿದಾಗ "ಇದೇನು? ಕವಿಯಾಗಿರುವಿರಲ್ಲ!" ಎಂದು ಆ ಮಿತ್ರರು ಉದ್ಗಾರ ತೆಗೆದರೋನೋ! ಅಥವಾ ಯಾವ ಹಿನ್ನೆಲೆಯಲ್ಲಿಯೋ ಏನೊ ಈ ಕವನ ಅವರಿಂದ ಹೊರಹೊಮ್ಮಿದೆ. "ನಾನೇನು ಕವಿಯಲ್ಲ! ನನ್ನ ಯೋಗ್ಯತೆಯೇನು! ನಾನೇನು" ಎಂದು ಅವರು ಅಂತರ್ಮುಖರಾಗಿ "ಈ ಕವನೆಯ ರಚನೆಯ ಹಂಬಲವೇಕೆ?—ಕವಿಯಾಗಬೇಕೆಂಬ ಹಂಬಲವೇ ನನಗೆ?" ಎಂದು ಅವರು ತಮ್ಮಷ್ಟಕ್ಕೆ ತಾವೇ ಅಂದುಕೊಂಡಿರಬೇಕು. ಆದರೆ ಬಾಳಿನ ಕಾವು-ನೋವುಗಳ, ಸಿಹಿಕಹಿಗಳ ರಸಾಸ್ವಾದನೆ ರಸಿಕರಾದ ಅವರ ಹೃದಯದಿಂದ ಕಾವ್ಯರಸವಾಗಿ ಹರಿದಿದೆ.]

---

## ಅಂತರಾತ್ಮನಿಗಾಗಿ—೨

### ಝುಗಝುಗಿಸಲೆದೆಯೊಳಗೆ ಶಿವಶಾಂತಿ ಹೊಂಬೆಳಕು

ಜೀವಿಗಳ ಹೃದಯದಲಿ ರಾಜಿಪುದು ಗರ್ಭಗುಡಿ ।
ಮುತ್ತಿರುವ ಕತ್ತಲೆಯ ಮೊತ್ತವದು ಬತ್ತಿಹುದು ।
ಬೆಳಕನ್ನು ತಂದಿಹುದು ಶಾಂತಿಯನು ಕೊಡುತಿಹುದು ।
ಸತ್ಯತೆಯ ಜ್ಯೋತಿಯದು ಚಿಮುಕುವದು ಚಿತ್ತದೊಳು ॥ ೧ ॥

ಹೃದಯದೀ ಪಣತಿಯೊಳು ಸದ್ಭಕ್ತಿ ತೈಲವನು ।
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡೆ ।
ಶಿವಭಾವದಲ್ಲಿ ತಾ ಕುಳಿತಿರುವ ಈಶ್ವರನು ।
ದರ್ಶನವ ಕೊಡುತಿಹನು ಆ ಜ್ಯೋತಿ ಬೆಳಕಿನೊಳು ॥ ೨ ॥

ಮನದೊಳಗೆ ಹುಗಿದಿರ್ಪ ಅಜ್ಞಾನವಳಿಯುತ್ತ ।
ದೀಪದೊಳು ಒಳಬೆಳಕು ತೋರುತ್ತ ಬೆಳಗಿಸಲಿ ।
ದೀಪೋತ್ಸವೆಮಗೆಲ್ಲ ಚಿರಶಾಂತಿ ಹರಡುತಲಿ ।
ಝಗಿಝಗಿಸಲೆದೆಯೊಳಗೆ ಶಿವಶಾಂತಿ ಹೊಂಬೆಳಕು ॥ ೩ ॥

---

[ ಮಾನವನ ಹೃದಯದ ಗರ್ಭಗುಡಿಯಲ್ಲಿ ಶಿವಜ್ಯೋತಿ ಬೆಳಗುತಿದೆ. ಆ ಜ್ಯೋತಿ ಮನದ ಕತ್ತಲೆಯ ಕಳೆದು, ಅಜ್ಞಾನವ ಕಳೆದು ಜೀವಲೋಕಕ್ಕೆಲ್ಲ ಶಾಂತಿಯ ಬೆಳಕನ್ನು ದಯಪಾಲಿಸಲಿ ಎಂದು ಈ ಕವನದಲ್ಲಿ ಶ್ರೀ. ಶಿವಲಿಂಗಪ್ಪನವರು ಹಾಡಿರುವರು ]

---

## ಅಂತರಾತ್ಮನಿಗಾಗಿ—೩

### ಹೃದಯವೇ ಇರುತಿಹುದು ಶಿವನಿರುವ ಮಂದಿರವು

ಹೃದಯವೇ ಇರುತಿಹುದು ಶಿವನಿರುವ ಮಂದಿರವು ।
ಜ್ಞಾನದಾ ನೇತ್ರವನು ತೆರೆದರದು ಕಾಣುವದು ।
ಎಲ್ಲಿದ್ದರೇನಂತೆ ಆ ಭವ್ಯ ಭಾವನೆಯ ।
ತೊರೆಯದಲೆ ಮರೆಯದಲೆ ಧ್ಯಾನಿಸಿರೆ ಸೊಗಸಿಹುದು ॥ ೧ ॥

ಮಂದಿರದ ಸುತ್ತಲುಂ ಸತ್ಯದಾ ಗೋಡೆಯನು ।
ಕಟ್ಟಿದೊಡೆ ಒಳಗಿರುವ ಶಾಂತಿಯದು ದೊರಕುವದು ।
ಭಕುತಿಯಿಂ ಕೈಮುಗಿದು ಜಪಿಸಿದೊಡೆ ಧ್ಯಾನಿಸಿರೆ ।
ಹೃದಯದಾ ಮಂದಿರವು ಹೊಳೆಯುವದು ಥಳಥಳನೆ ॥ ೨ ॥

ಮುಸುಕಿರುವ ಅಜ್ಞಾನ ಮಬ್ಬನ್ನು ದೂಡಿದೊಡೆ
ಶಿವಯೋಗದೊಳಗಿರುವ ಶಿವತೇಜ ಕಾಣುವದು ।
ಹೃದಯದೊಳು ಶಿವಯೋಗ ಶಿವಭಾವ ಬಲಿಸಿದೊಡೆ
ಶಿವತೇಜ ಐಕ್ಯವೇ ದಿವ್ಯಾತ್ಮ ತಾನಹುದು ॥ ೩ ॥

---

[ ಮಾನವಹೃದಯದಲ್ಲಿ ಸತ್ವದ ಗೋಡೆಗಳ ಮಧ್ಯದಲ್ಲಿ ಶಿವಾಲಯವು ನಲಿಯುವುದು. ಜ್ಞಾನದ ಕಣ್ಣು ತೆರೆದು ಭಕ್ತಿಯಿಂದ ಕೈಮುಗಿದಲ್ಲಿ, ಈ ಹೃದಯ ಮಂದಿರದಲ್ಲಿಯ ಶಿವ ಮಂದಿರ ಹೊಳೆದು, ಅಜ್ಞಾನದ ಮಬ್ಬು ಚದುರಿ, ಶಾಂತಿ ಮೈದೋರಿ, ಶಿವಭಾವ ಬಲಿತು ಮಾನವನು ಶಿವತೇಜದಲ್ಲಿ ದಿವ್ಯಾತ್ಮನಾಗುವನು ಎಂಬ ಭಾವ ನೆಲೆದಿದೆ ಈ ಕವನದಲ್ಲಿ.]

———

## ಅಂತರಾತ್ಮನಿಗಾಗಿ—೪

### ಎಂದೆಂದಿಗೂ ಸುಪ್ರಭಾತ ಕಾಣುತಿರಲಿ

ಹೃದಯಪೂರ್ವಾದ್ರಿಯಲಿ ಜ್ಞಾನ-ಭಾಸ್ಕರನಿಂದು |
ಅನುಭೂತಿ—ಕಿರಣಗಳ ಬೀರಿ ಬರಲಿ |
ಜನುಮ ಜನುಮದಿ ಬಿಡದೆ ಬೆಂಬತ್ತಿ ಬಂದಿರುವ |
ಮರಹುಗತ್ತಲೆಯಿಂದು ಹರಿದು ಬಿಡಲಿ ||

ಸದ್ವಾಸನಾವಾಯು ಒಯ್ಯನೊಯ್ಯನೆ ತೀಡೆ |
ತನುಮನವು ಸತ್ವಕಂಪಿತವಾಗಲಿ |
ಎಂದುಮರಳದ ಸುಪ್ತ ಸಂಸ್ಕಾರ—ಮುಕುಲಗಳು |
ಮಂದಹಾಸವ ಬೀರೆ ಮುದವೀಯಲಿ |
ಲೋಕ ಕಲ್ಯಾಣಕರ ಗುಣ-ಗಂಧವೆಲ್ಲೆಲ್ಲಿಯುಂ |
ಹರಡಿ ಭುವನ ಸಂತರ್ಪಣವಾಗಲಿ |
ಆಧ್ಯಾತ್ಮದಾನಂದದಲಿ ಶಿವಜೀವ ಸಮರಸದಲಿ |
ಮನೋಭ್ರಮರ ರಸವೀಂಟಿ ಮಲೆತಲೆಯಲಿ |
ಮಲ್ಲಿಕಾರ್ಜುನ ಸ್ವಾಮಿಗಳ ಭಾವ ಬೋಧಾಮೃತದ |
ಮಧುರ ಮಂಜುಳನಾದ ವಿಜಯಪುರದಿ ಮಂಗಳ |
ಲೋಕ-ಪರಮಾರ್ಥಂಗಳೆಂಬ ರುಚಿರ ಪವಿತ್ರ |
ಯಮುನೆ-ಗಂಗೆಗಳ ತೆರದಿ ಸಂಗಮವಾಗಲಿ |
ಬಾಳ ಬಟ್ಟೆಯೊಳಲೆದು ದಣಿದ ಮಾನವರಲಿ |
ನವ ಚೈತನ್ಯವದು ಚಿಮ್ಮಿ ಬರುತಿರಲಿ |
ಲೋಕಜಾಲವಿವೆಲ್ಲ ಸುಖಶಾಂತಿ ಪೊಂದಲಿ |
ಎಂದೆಂದಿಗೂ ಸುಪ್ರಭಾತ ಕಾಣುತಿರಲಿ |
ಜೀವ-ಪರಶಿವರೆಂಬ ಜಕ್ಕವಕ್ಕಿಗಳಂದದಲಿ |
ಬೆರಸಿ ಬೇರಾಗದೊಲು ನಿತ್ಯ ಬೆರೆದು ಬಿಡಲಿ ||

———

[ ಗೀತಾಚಾರ್ಯ ಶ್ರೀ. ಮಲ್ಲಿಕಾರ್ಜುನ ಸ್ವಾಮಿಗಳ ಪ್ರವಚನವೆಂದರೆ ವಿಜಾಪುರದ ಜ್ಞಾನಪಿಪಾಸುಗಳಾದ ಆತ್ಮಾರ್ಥಿಗಳಿಗೆ ಹಿರಿಹಬ್ಬ. ಇಂಥ ಪ್ರವಚನಗಳ ಜ್ಞಾನಯಜ್ಞವು ವಿಜಾಪುರದಲ್ಲಿ ಸಾಗಿದಾಗ ನಿತ್ಯಯಜ್ಞಭೂಮಿಯಲ್ಲಿ—ಶಿವಾನುಭವಮಂಟಪದಲ್ಲಿ—ಉಪಸ್ಥಿತರಾಗಿ ಶ್ರೀ. ಶಿವಲಿಂಗಪ್ಪನವರು ಸ್ವಾಮಿಗಳ ಬೋಧಾಮೃತವನೀಂಟಿರಲು ಹೊರಹೊಮ್ಮಿದ ಕವನವಿದು:- ಸ್ವಾಮಿಗಳ ಪ್ರವಚನದಿಂದ ಜ್ಞಾನಭಾಸ್ಕರನು ಉದಿಸಿ, ಅಜ್ಞಾನ ತಿಮಿರ ತೊಲಗಿ, ಸುಪ್ರಭಾತ ತಲೆದೋರಿ, ಪ್ರಪಂಚ-ಪರಮಾರ್ಥಗಳ ಗಂಗಾ-ಯಮುನಾ ಸಂಗಮದಲ್ಲಿ ಶಾಂತಿಭಕ್ತಿಗಳಿಂದ ಮಾನವತೆ ಮಿಂದು ಶಿವಜೀವ ಸಮರಸವಾಗಲಿಎಂದು ಕವನಕಾರರು ಈ ಕವನದಲ್ಲಿ ಹಾಡಿ ಹಾರೈಸಿರುವರು.]

———

## ಅಂತರಾತ್ಮನಿಗೆ—೫

### ನಲ್ಗನಸು

ಬಾಳ ಬಳಿಕೆಯ ಭಾವ ಬಲಪಡಿಸಿದ ದಿನದಿ ತೊಳಲಿದಾತ್ಮ

ಏಕೊ ಏಕಾಂತದಲಿ ಏಕಾಕಿಯಾಗಿರಲು |
ಮೂಕ ಶೋಕ ಚಿತ್ತ ಕಣ್ಣ ತಾಗಿ |
ಮನದ ನೀರವ-ಬಾನ ನಡುವೆ ಬಣ್ಣದ ಮೋಡ |
ಸುಳಿದು ನುಸುಳುವುದಯ್ಯಾ ದೀನವಾಗಿ || ೧ ||

ನೆಲದ ಸುಂಟರಗಾಳಿ; ತುಂಟತನದಲಿ ದಾಳಿ |
ಇಡಲು ಚದುರಿನ ಮೋಡ ದಿಕ್ಕು ಪಾಲು |
ಒಳಗಣ್ಣ ತಿಳಿನೋಟ ಕರಗಿ ಕಂಬನಿಯಾಗಿ |
ಹೊರಗಣ್ಣಿನಂಚಿನಲಿ ಕಂಬನಿಗಳು || ೨ ||

ಜೇನು ಹನಿಹನಿಯಾಗಿ ಹರಿವುದೊಲವು |
ನೆನಹಿನಲಿ ಜೀವನವು ಮಧುರತರವು |
ಮನವ ನಿಮ್ಮೈಗೊಂಡು ಎಲ್ಲ ಬಳಗ ಬಾಳವು |
ನೆನಹು ನಲ್-ಗನಸಾಗಿ ತೋರುತಿಹುದು || ೩ ||

———

[ಶ್ರೀ. ಶಿವಲಿಂಗಪ್ಪನವರು—ಏಕಾಂತದಲ್ಲಿ ಮಗ್ನರಾದಾಗ ಮೈದೋರಿದ ಕಹಿನೆನಹುಗಳೆಲ್ಲ ಅವರ ಅಂತರಾತ್ಮದ ಮನನ-ಧ್ಯಾನದ ಮತ್ತು ಶಿವಾನುಭವದ ಅಮೃತಸೇಕದಿಂದ ಮಧುರತರವಾಗಿ ಬಳಗ ಬಾಳು ಎಲ್ಲವೂ ಒಂದು ಸುಖಸ್ವಪ್ನದಂತೆ—ನಲ್ಗನಸಿನಂತೆ—ಭಾಸವಾಗುವದೆಂಬ ಭಾವ ಮೂಡಿದೆ ಈ ಕವನದಲ್ಲಿ.]

———

## ಅಂತರಾತ್ಮನಿಗಾಗಿ—೬

### ಅನವರತ ಮನಕೆನ್ನ ಶಿವಕೋಟಿಜಪವಿರಲಿ

ನಿರ್ಮಲತೆ ನನಗಿರಲಿ ಸಿರಿಯಹಂ ಬರದಿರಲಿ |
ಕಡು ಕಷ್ಟಗಳು ಸದಾ ಒದಗುತಿರಲಿ |
ಸೊಗಸಿನಾ ನಗುವಳಿದು ದುಃಖದಾ ಅಳು ಬಂದು |
ಈಶನರಸುವ ಭಾವ ಮೂಡುತಿರಲಿ || ೧ ||

ಮುಡಿಪಿಡುವೆ ಈ ತನುವ ನಿರ್ಮಲತೆಯಾಗರಕೆ |
ಕಡೆತನಕ ಇರಲೆನಗೆ ನಿನ್ನ ಧ್ಯಾನದ ಚಿಂತೆ |
ಅರ್ಪಿಸುವೆ ಈ ಮನವ ಅಂತರಾತ್ಮನ ಅಡಿಗೆ |
ಕರುಣಿಸೈ ವಿಶ್ವೇಶ ಹಗಲಿರುಳು ಹರುಷದಲಿ || ೨ ||

ಚೆಲುವಿನಲಿ ಚಿಮ್ಮುತಿಹ ಆ ಮುಗುಳು ನಗೆಯಂತೆ |
ಭಾವಿಕನ ಈ ಮುಖದಿ ನಗುವುಯಿರಲಿ |
ಮುಂಜಾನೆ ಮಂಜಿನಲಿ ರಂಜಿಸುವ ಉಷೆಯಂತೆ |
ಪರಿಶುದ್ಧವೀ ಭಾವ ಕಷ್ಟದೊಳು ಬೆಳಗಿರಲಿ || ೩ ||

ಒಲುಮೆಯೊಳು ನೆಲೆಸಿರುವ ಸೊಬಗಿನಾ ತೆರನಂತೆ |
ಅಡಗಿಹುದು ನಿರ್ಮಲತೆ ಹೃದಯದಲ್ಲಿ |
ಫಲಗಳಾ ಗರ್ಭದಲಿ ಹುದುಗಿರುವ ರುಚಿಯಂತೆ—
ಮೃಡನಿಹನು ಸರಳತೆಯ ಭಾವ ಭಾಗ್ಯದಲಿ || ೪ ||

ನಿರ್ಮಲದ ದಯೆಯಿರಲಿ ಕಡುಮಮತೆಯೊಂದಿರಲಿ |
ಭಾವಿಪರ ಭಾಗ್ಯನಿಧಿ ಶಾಂತತೆಯು ತರಲಿ |
ದಿವ್ಯ ಜೀವನವಿಂದು ಬಾಳಿ ಬಳಸಲಿಯೆಂದು |
ಅನವರತ ಮನಕೆನ್ನ ಶಿವಕೋಟಿ ಜಪವಿರಲಿ || ೫ ||

---

[ಕಷ್ಟನಷ್ಟ ಬರಲಿ, ಅಹಂಕಾರ ಮಾತ್ರ ಬರದಿರಲಿ. ಸೊಗಸು ಅಳಿಯಲಿ, ಈಶನರಸುವ ಭಾವ ಮಾತ್ರ ಮೂಡಲಿ. ಏನಾದರೂ, ಎಂತಾದರೂ, ತಮ್ಮ ಅಂತರಾತ್ಮದಲ್ಲಿ ಶಿವಧ್ಯಾನದ ಚಿಂತೆಯೇ ಇಡುಗಲಿ, ಮನಕೆ ಅನವರತ ಶಿವಕೋಟಿ ಜಪವಿರಲಿ, ದಿವ್ಯಜೀವನದ ಬೆಳಕು ತಮ್ಮ ಬಾಳಬಟ್ಟೆಯನ್ನು ಬೆಳಗಲಿ ಎಂದು ಶ್ರೀ. ಶಿವಲಿಂಗಪ್ಪನವರು ಭಗವಂತನನ್ನು ಈ ಕವನ ದಲ್ಲಿ ಪ್ರಾರ್ಥಿಸಿಕೊಂಡಿರುವರು.]

---

# ಅಂತರಾತ್ಮನಿಗಾಗಿ—೭

## ಶಿವಧ್ಯಾನದಲ್ಲಿ ನಾನು ಮುಳುಗಿ ಮುಕ್ತನಾಗುವೆ !

ಶಿವಧ್ಯಾನದಲ್ಲಿ ನಾನು ಮುಳುಗಿ ಮುಕ್ತನಾಗುವೆ |
ಇದುವೆ ಸುಖವು ಇದುವೆ ಸುಖವು ನನಗೆ ಭಯವಿನ್ನಾವದು? |
ಇಚ್ಛೆಯಂತಾದುದಕ್ಕೇಕೆ ಚಿಂತಿಸಬೇಕು
ಮರಣಕ್ಕೆ ಮರುಗಲು ಬೇಡ ಬೇಡ ‖ ೧ ‖

ಸೇವೆಯೇ ಜೀವನದ ಧ್ಯೇಯವೆನ್ನುವವಂಗೆ |
ಸುಖದುಃಖ ಸಾವುಗಳ ಅರಿವೇಕೆ? ಪರಿವೇಕೆ?
ತನ್ನ ಸೇವೆಯ ಫಲವು ತನ್ನವರ ಸುಖಕಾಗಿ |
ಮೀಸಲೆನುವನ ದುಃಖಕರ್ಥ ಬೇಕೆ? ‖ ೨ ‖

ಆ ಕಾಲವೊಂದಿತ್ತು ಚೈತನ್ಯ ತುಂಬಿತ್ತು |
ಜನಸಮಾಜೋನ್ನತಿಗೆ ಹೋರಾಡಿದೆ |
ಹೋರಾಡಿ ಜಯಿಸಿದರೆ ಸುಖವೆಂದು ನಾ ತಿಳಿದೆ |
ಹೋರಾಟವೆ ಸುಖದ ಸೆಲೆಯೆಂದು ತಿಳಿದೆ ‖ ೩ ‖

ಇದುವೆ ಸೇವೆಯು ಸತ್ಯ ಉಳಿದೆಲ್ಲವು ಮಿಥ್ಯ |
ತನ್ನರಿವೆ ತನಗೆ ಗುರುವೆಂದೆಂದಿಗೂ ಸತ್ಯ |
ತನ್ನ ತಿಳಿವಿನ ದಾರಿಯಲಿ ಮುಳ್ಳು ಬೆಳೆದಿರಲಿ |
ವಿಶ್ವಾಸವಿಡಲದುವೆ ಹೂದಾರಿ ಸತ್ಯ ‖ ೪ ‖

ನನ್ನ ಅದೃಷ್ಟದ ನೀರು ತಣ್ಣನೆಯ ನೀರಲ್ಲ |
ನೋವು ನಲುವಿನ ಕುಲುಮೆಯೊಳು ಕಾಯ್ದ ಜಲವು |
ಸುಖ ಸಮತೆಯುದಯಕ್ಕೆ ದುಃಖ ದಾರಿದ್ರ್ಯ ಮೆಣ್ |
ಕಷ್ಟ ಕ್ಲೇಶಗಳ ಸುಡುವ ಅಗ್ನಿ ಜಲವು ಕಾಣ್ ‖ ೫ ‖

ಭಾವ ಬಳಲಿಕೆಯು ಪರಿಶುದ್ಧವಾಗಲಿ ಎಂದು |
ಭವವಳಿಯಲು ಕಾಶಿಕ್ಷೇತ್ರ, ಸ್ಥಾನದಲಿ ಬಂದು |
ಭವನಾಶ ಜಡೆಯ ಶಂಕರಲಿಂಗ ಧ್ಯಾನದೊಳೆಂದು |
ಜೀವ ಮಾನದ ಆತ್ಮಶಾಂತಿ ಸ್ಥಿರವಾಗಲೆಂದು ‖ ೬ ‖

ಸುರಲೋಕವೇನೆನಗೆ ನರಲೋಕವೇನೆನಗೆ |
ಉರಗಮಯಲೋಕ ತಾನಾದಡೇನು |
ವರಶಂಕರಲಿಂಗನ ಕೋಟಿ ಮಂತ್ರದ ನೆನವು |
ದೊರೆಕೊಳ್ಳಲು ಶಿವಲೋಕ ತಾನಿರ್ಪುದು || ೭ ||

---

[ಶ್ರೀ. ಶಿವಲಿಂಗಪ್ಪನವರು ಪ್ರಪಂಚದಲ್ಲಿ ಯಶಸ್ಸಿಗಾಗಿ, ಜನಸೇವೆಗಾಗಿ, ಸಮಾಜೋನ್ನತಿಗಾಗಿ ಹೋರಾಡಿದರು. ಹೋರಾಟವೇ ಸುಖದ ಸೆಲೆಯೆಂದು, ಹೋರಾಟದಲ್ಲಿಯ ಜಯವೇ ಸುಖವೆಂದು ತಿಳಿದು ಹೋರಾಡಿದರು. ಆದರೆ ಆ ಹೋರಾಟ ಆತ್ಮಕ್ಕೆ ಬಳಲಿಕೆಯನ್ನುಂಟು ಮಾಡಿತು. ಈ ಬಳಲಿಕೆಯ ಭಾವವನ್ನು ಅಳಿಯಲು, ತನ್ನ ತಾನರಿವುದೇ, ಸತ್ಯವೆಂದು, ಶಿವಧ್ಯಾನದಲ್ಲಿ ಮುಳುಗಿ ಮುಕ್ತನಾಗುವುದೇ, ಮುಕ್ತರಾಗಿ ಸೇವೆಗೈಯ್ಯುವುದೇ ಜೀವನದ ಧ್ಯೇಯವೆಂದು ಕಾಶೀಕ್ಷೇತ್ರದಲ್ಲಿ ನಿಂತು ಜೀವಮಾನದ ಆತ್ಮಶಾಂತಿ ಸ್ಥಿರವಾಗುವಂತೆ ಶಂಕರಲಿಂಗನ ಕೋಟಿಮಂತ್ರ ಜಪವನ್ನು ಮಾಡಿದರೆಂದು ಈ ಕವನವು ಕವನಕಾರರು ಕಾಶಿಗೆ ಕೈಕೊಂಡ ಆಧ್ಯಾತ್ಮಿಕ ಯಾತ್ರೆಯ ವಿಷಯವನ್ನು ಕುರಿತಾಗಿದೆ.]

---

## ಅಂತರಾತ್ಮನಿಗಾಗಿ—೮

### ವಿಜಯೋತ್ಸವ

ಕತ್ತಲಲಿ ಹೊರಟಿರುವೆ ವಿಜಯದಾ ಉತ್ಸವಕೆ |
ಎತ್ತ ನೋಡಿದಡತ್ತ ಬಿದ್ದಿಹವು ಕಲ್ಬಂಡೆ |
ಕುತ್ತಿಗೆಯನೆತ್ತಿದೊಡೆ ಮುತ್ತಿಹುದು ಮೋಡವದು |
ಎತ್ತರದ ದಿಬ್ಬದೊಳು ಹೋದಡೆಯು ಮಬ್ಬಿಹುದು || ೧ ||

ವಿಜಯದಾಶೆಯದು ತಾ ತುಂಬಿಹುದು ಮನದೊಳಗೆ |
ವಿಜಯವನು ಪಡೆಯಲ್ಕೆ ಬಲವಿಲ್ಲದಾಗಿಹುದು |
ಬೆಳಕಿರದೆ ವಿಜಯವನು ಪಡೆವವನ ಹಂಬಲವು |
ಬಳಲಿ ಪರ್ವತಕೆ ತಾ ಕಲ್ಲೆತ್ತಿ ಹೊತ್ತಂತೆ || ೨ ||

ವನವೆಲ್ಲ ಹಸನಾಗಿ ಬಳ್ಳಿಯೆಲ್ಲ ಹಸುರಾಗಿ |
ಗಿಡವೆಲ್ಲ ಹೂಕಾಯಿ ಪಣ್ಗಳಿಂ ತುಂಬಿದೊಡೆ |
ಸೌಗಂಧ ಧೂಪವದು ವನವನಾವರಿಸಿದೊಡೆ |
ವಿಜಯ ತಾ ಮೆರೆಯುವುದು ಬೆಳಗುವದು ಚಿರಕಾಂತಿ || ೩ ||

ವಿಜಯದಿಂ ಸಾಮ್ರಾಜ್ಯ ವಿಜಯದಿಂ ಸರ್ವಸುಖ |
ವಿಜಯವೇ ಜೀವನಕೆ ಚೇತನವು ಕೀರುತಿಯು |
ಸಂತೋಷ ಶರಧಿಯೊಳು ಈಜಿ ತಾ ಮುನ್ನೆಡೆಯೆ |
ವಿಜಯವೇ ಕಾರಣವು ಶಕ್ತಿಗದು ಆಸರವು || ೪ ||

ಮನದೊಳಗೆ ಕುಳಿತಿರುವ ಜಡೆಯ ಶ್ರೀ ಶಿವಲಿಂಗ |
ವಿಜಯದುತ್ಸವಗೈವ ಶಕ್ತಿಯುಕ್ತಿಯ ನೀಡು |
ಬಾಗುವೆನು ಭಕುತಿಯಿಂ ಬೇಡುವೆನು ನಿನ್ನನಿದೆ |
ವಿಜಯರಾಜ್ಯದಿ ನಿತ್ಯದರ್ಶನವ ಕೊಡು ತಂದೆ || ೫ ||

---

[Dark night of the Soul ಎಂದು ಪಡುವಣದ ಆಧ್ಯಾತ್ಮವಾದಿಗಳು ವಿವರಿಸಿದ ಮತ್ತು ಅಂಧಂತಮಸ್ಸೆಂದು ಉಪನಿಷತ್ಕಾರರು ಸಾರಿರುವ ಕತ್ತಲೆಯಲ್ಲಿ ಹೊರಟಿರುವ ತಮಗೆ ವಿಜಯದ ಆಶೆ ಫಲಿಸಲು, ದಿವ್ಯಾತ್ಮದ ಬೆಳಕು ಹೊಳೆಯಲ, Grace of God—ಭಗವಂತನ ಪ್ರಸಾದವೇ ಬೇಕೆಂದು, ಆ ಪ್ರಸಾದವನ್ನು ನೀಡೆಂದು, ಸುತ್ತೆಲ್ಲ ಮುತ್ತಿ ನೆತ್ತಿಯನ್ನು ಕತ್ತನ್ನು ಒತ್ತುತಿಹ ಕತ್ತಲೆಯನ್ನು ಕಳೆಯಲು ಶಕ್ತಿಯನ್ನು ಕೊಡು ಎಂದು ಕವನಕಾರರು ಪರಮಾತ್ಮನಿಗೆ ಕೂಗಿಕೊಂಡಿರುವರು ಈ ಕವನದಲ್ಲಿ.]

---

## ಅಂತರಾತ್ಮನಿಗಾಗಿ—೬

### ಜಡೆಯ ಶಂಕರಲಿಂಗ ಜಗಕೆ ಆಧಾರ

ನನ್ನ ನಾನೆ ಮನವ ನರಿದು ಧನ್ಯನಾಗುವಂದಿಗು |
ಏನು ಬೇಕು ಏನು ಬೇಡ ನಾನು ತಿಳಿಯೆನೆಂದಿಗು |
ಹಿಂದೆ ಬೇಕು ಎಂದುದೆಲ್ಲ ಇಂದು ಬೇಡವಾಗಿದೆ |
ಇಂದು ಬೇಡವೆಂದುದಿನ್ನು ಮುಂದೆ ಬೇಕು ಎನಿಸದೆ | || ೧ ||

ಬೇಕು ಬೇಡವೇಕೆ ಆಶೆ ಬೋಕೆಯಿಂದ ನಡೆಯುವೆ |
ಹರ್ಷ ಸೌಖ್ಯವೇಕೆ ಬೇಕು? ತೊರೆವ ಸಾಧವ ಪಡೆಯುವೆ |
ಬೇವು ಬೆಲ್ಲದಾವ ನುಡಿಯ ಇಲ್ಲಿ ಕಿವಿಯ ಕೇಳಲು |
ಬಳಲಿ ಬೆಂದ ಮನಗಳನ್ನು ಇಲ್ಲಿ ಕಣ್ಣು ಕಾಣಲು || ೨ ||

ಹಿಂಜಿ ನೋಡೆ ಬಂಜೆ ಬಾಳು ಅಂಜಿಕೇಕೆ ನುಡಿಯಲು |
ಗಂಜಿ ಇರಲಿ ನಂಜು ಬರಲಿ ಅಂಜಲಾರೆ ಕುಡಿಯಲು |

ಸಣ್ಣದಿರಲಿ ದಿನ್ನೆ ಬರಲಿ ಮುನ್ನದಾರಿ ನಡೆಯಲು? |
ಸನ್ನಿಧಿಯಲಿ ಸಿದ್ಧನಿರುವೆ ಸಗ್ಗದಾರಿ ಹಿಡಿಯಲು || ೩ ||

ತಪ್ಪೆ ಇರಲಿ ಒಪ್ಪೆ ಇರಲಿ ಗಪ್ಪುಗೊಂಡು ಸಾಗುವೆ |
ಬಪ್ಪ ಕುಗ್ಗ ಒಪ್ಪ ಹಿಗ್ಗ ನೆಪ್ಪನೆಲ್ಲ ನೀಗುವೆ |
ಸಂಸಾರದಲ್ಲಿಯು ಭಾಗೆ ಸಮತತ್ವದೊಳಿರಿಸಿರುವೆ |
ನಂದು ಹೋದ ಮೇಲೆ ನೊಂದದಂತೆ ಇರುತಿರುವೆ || ೪ ||

ಸತ್ಪ್ರೀತ ಸುಕ್ಷೇತ್ರ ಸತ್ಪುರುಷರ ಸಂದರ್ಶನದೊಳಿರುವೆ |
ಸದ್ಭಾವ ಅಳವಟ್ಟು ಮೇಲೆ ಆತ್ಮಜ್ಯೋತಿ ನೋಡುವೆ |
ಇಂದು ನನ್ನ ಮುಂದೆ ಒಂದು ಹೊನ್ನಿನ ರಾಶಿ ಬೀಳಲಿ |
ಬಂದ ಹಿಂಗನೆಣಿಸದಂತೆ ಮನವು ಶಿವನಲಿ ಬೆರೆಯಲಿ || ೫ ||

ಕಷ್ಟ ಬರಲಿ ಬಟ್ಟೆಗೆಟ್ಟು | ಸಿಟ್ಟಿಗೇಳದಾಗಲಿ |
ಕಷ್ಟಗೊಳದ ದುಷ್ಟ ದೇಹ | ನಷ್ಟವಾಗಿ ಹೋಗಲಿ |
ಇಷ್ಟ ಶಂಕರಲಿಂಗ ದೇವ | ಗೆನ್ನ ಶಿರವು ಬಾಗಲಿ |
ಶ್ರೇಷ್ಠ ಅಮೃತಾನ್ನವುಣಿಸಿ | ನನ್ನನವನು ತಣಿಸಲಿ | || ೬ ||

ಪ್ರೇಮ ಪ್ರಸಾದ ಶರೀರ | ರಕ್ಷಣೆಯ ಆಧಾರ |
ನಿರ್ಮಲ ಹೃದಯ ವಿಕಾಸ | ಶಿವಧ್ಯಾನಕಾಧಾರ |
ಗುರುಕೃಪೆಯೆ ಮುಮುಕ್ಷುಗಳ | ಮುಕ್ತಿಗಾಧಾರ |
ಜಗದೊಡೆಯ ಜಡೆಯ ಶಂಕರಲಿಂಗ ಜಗಕೆ ಆಧಾರ || ೭ ||

---

[" ಅಂತರಾತ್ಮನಿಗಾಗಿ " ಎಂಬ ಶಿರೋಲ್ಲೇಖದ ಕೆಳಗೆ ಬಂದ ಹನ್ನೊಂದು ಕವನಗಳೆಲ್ಲ ಕವನಕಾರರ ಆತ್ಮದ ಅಧ್ಯಾತ್ಮ ಯಾತ್ರೆಯ—Pilgrimage of the Soul—ಹಾದಿಯ ಮೇಲಿನ ಹೆಜ್ಜೆಗಳ ಗುರುತುಗಳಾಗಿವೆ. ಈ ಕವನಗಳೆಲ್ಲ ಆತ್ಮಾರ್ಥಿಗಳೆಲ್ಲರಿಗೂ ದಾರಿದೀಪವಾಗಿವೆ.

ಹಿಂಜ ನೋಡಲು ಬಾಳು ಬಂಜೆ. ಬೇಕು ಬೇಡವೆಂಬ ಆಶೆಯೇಕೆ? ಸೌಖ್ಯಬರಲಿ, ದುಃಖಬರಲಿ, ಕಷ್ಟಬರಲಿ, ದೇಹ ನಷ್ಟವಾಗಲಿ, ಏನಾದರೂ ಆಗಲಿ, ಇಷ್ಟ ಶಂಕರಲಿಂಗನಿಗೆ ತಮ್ಮ ತಲೆ ಬಾಗಲಿ, ಅವನೇ ಜಗಕೆ ಆಧಾರ, ಅವನೇ ತಮಗೆ ದಿವ್ಯ ಜೀವನದ ಅಮೃತಾನ್ನವನುಣಿಸಲಿ, ಎಂದು ಕವನಕಾರರು ಧೀರರಾಗಿ ಹಾಡಿದ ವೀರ ಕವನವಿದು.]

---

## ಅಂತರಾತ್ಮನಿಗಾಗಿ—೧೦

### ರಕ್ಷಿಸಲು ಶ್ರೀ ಶಂಕರಲಿಂಗ ದೇವನಿಹನು

ಸುವಿಚಾರದಿಂ ಕರೆಯುತಿದೆ ಸದ್ಭಾವ "ಬಾ" ಎಂದು |
ಬಾಳ್ಗೆಟ್ಟ ಜೀವನದ ಪರಿಯು ಸಾಕೆಂದು |
ಅಳಿದೈಸಿರಿಯನು ಎಂತು ತೊರೆಯುವದೆಂದು |
ಸನ್ನೆ ಮಾಡುತಿದೆ ಕೆಲಕಾಲ ನಿಲ್ಲೆಂದು || ೧ ||

ಎನಿತು ದಿನ ಕಾಯುವದು ತೋರಿಕೆಯ ಈ ಶಕ್ತಿ |
ಮೋಹ ಮಾಯದ ನಿರ್ಬಲವು ನೋಡೆ |
ಏನಿಲ್ಲದಿರ್ದೊಡಂ ಕಾಯುತಿದೆ ಬಲು ಯುಕ್ತಿ |
ಅದು ನಿಜವೋ? ತಾನೆ ಬದುಕುವದು ನೋಡೆ || ೨ ||

ನಿನ್ನೆಯದು ಇಂದಿಲ್ಲ ಇಂದಿನದು ಮುಂದಿಲ್ಲ |
ಜೇನು ಸವಿನುಡಿ ಹೊರಗು ಒಳಗೆಲ್ಲ ಕಿಚ್ಚು |
ಬಿಡುವೆನೆಂದುಸುರಿರುವೆ ಬಿಡಲಿನಿತು ಮುನಿಸಿಲ್ಲ |
ಸಿರಿಯೊಡನೆ ಸುಖಿಸಲ್ಕೆ ನನಗಿನ್ನು ಹುಚ್ಚು || ೩ ||

ತೈಲ ಮುಗಿಯಿತು ಹಣತೆಯಲಿ ಹೊಳಪಿಳಿದು |
ಬತ್ತಿ ಕುಸಿಯುತಿದೆ ಜೀವ ಬತ್ತುವದು ನೋಡಿ |
ಉರಿಯೆದ್ದು ದಳ್ಳೆಂದು ಮೇಲೇರಿ ಕೆಳಗಿಳಿದು |
ನಂದುವುದು ಮರುಗುತ್ತ ಕೊನೆಗಾಲ ಮೂಡಿ || ೪ ||

ಕುಡಿನೋಟದೆಸಳಿನಿಂ ಕಡುನೇಹಮಂ ಬೀರಿ |
ಮರೆಯಲ್ಲಿ ಮೌನದಿಂ ಕಂಗಳನು ಮಿಸುಕಿ |
ಸ್ವೈರಣೆಯು ತರಿದಲ್ಲಿ ನಡೆದಿರುವ ಮೀತಿಮೀರಿ |
ತೆರೆಯಲ್ಲಿ ಯುಕ್ತಿಯಿಂ ಶಕ್ತಿಯನು ಹಿಸುಕಿ || ೫ ||

ವಿಷದ ಬೀಜವ ಬಿತ್ತಿ ವಿಷದ ಮರವನು ಬೆಳೆಸಿ |
ಅದರ ಚಿಕ್ಕೆಯ ತೇದು ರಸವನ್ನು ಕುಡಿಸಿ |
ಓ! ದ್ರೋಹಿ ಶಕ್ತಿಯೇ! ಕಪಟಕ್ಕೆ ಮನವೆಳಿಸಿ |
ಗೆದ್ದಿರುವೆ ಮತಿಕೆಡಿಸಿ | ಉನ್ಮಾದ ಹಿಡಿಸಿ || ೬ ||

ಹಿಂಮುಳಿಸುತ ಬಾಳನು ಸ್ಥಿರಗೊಳಿಸುತ ಆತ್ಮನನು |
ಭಾವನೆಯ ಬಲಿಸುತ ನಿಜಧ್ಯಾನ ಕಾಣುತ |

ಮಿಗೆ ಬೆಳಿಸಿ ಕೋಟಿ ಶಿವಮಂತ್ರ ಲೀನದೊಳಿರುವೆಸು |
ಭಕ್ತಿಯಿಂ ಭಾವ ಪರಿಶುದ್ಧಗೊಳಿಸುತ್ತ || ೭ ||

ಇನ್ನಾದರುಂ ಸರಿಯೇ ತಪ್ಪು ಒಪ್ಪುಗಳನ್ನು |
ಅರಿತು ಪಾಲಿಪೊಡೆ ನ್ಯಾಯ ಧರ್ಮಗಳನ್ನು |
ಮಾಡುತಿರೆ ಬೆಂಬಲಸಿ ಪೊರೆಯುವಾ ಶಿವನಿಹನು |
ಅನವರತ ರಕ್ಷಿಸಲು ಶ್ರೀ ಶಂಕರಲಿಂಗ ದೇವನಿಹನು || ೮ ||

---

[ "ಸಂಸಾರದ ತೋರಿಕೆಯ ಸಿರಿಯನ್ನು, ಹೊರಮೆರುಗಿನ ಮಾಯೆಯನ್ನು ತೊರೆದು ನನ್ನೆಡೆಗೆ ಬಾ" ಎಂದು ಪರಮಾತ್ಮನ ಕೂಗು ಅಂತರಾತ್ಮದಲ್ಲಿ ಅಂತರ್ಮುಖಿಯಾಗಿ ಆಲಿಸಿದಲ್ಲಿ ಮಾನವನ ಕಿವಿಗೆ ಕೇಳಲಾರದೆ ಇರದು. ಆದರೆ ಕೂಗನ್ನು ಕುಗ್ಗಿಸಿ ಕೇಳದಂತೆಸಗಿ ಸಂಸಾರದ ಸೊಬಗಿನತ್ತ ಮಾನವನನ್ನು ಕರೆದೊಯ್ಯುವ ಶಕ್ತಿಯೊಂದು, ಮೋಹದ ಮಾಯೆಯ ಬಲೆಯೊಂದು ಮಾನವನನ್ನು ಹಗಲಿರುಳು ತನ್ನ ಕಡೆಗೆ ಸೆಳೆಯುತ್ತಿರುತ್ತದೆ. ಇಂಥ ಎಳೆತ ಸೆಳೆತಗಳನ್ನು ಬಳಸುವ ಈ ಪ್ರಕೃತಿ-ಶಕ್ತಿಗೆ ಈ ಕವನವೊಂದು ಆಹ್ವಾನವಾಗಿದೆ. "ಏ ದ್ರೋಹಿಯಾದ ಶಕ್ತಿಯೇ, ಎಷ್ಟು ದಿನ ನೀನು ನನ್ನ ಮತಿಗೆಡಿಸಿ ಉನ್ಮಾದ ಹಿಡಿಸಿ ನಿನ್ನ ಬಲೆಯಲ್ಲಿ ಹಿಡಿದುಕೊಳ್ಳುವಿಕೆ? ಇದೋ ನಾನು ನಿನ್ನ ಬಲೆಯ ಬಿಸುಟಿ, ಬಾಳನು ಹಿಂದುಳಿಸಿ, ಆತ್ಮನನು ಸ್ಥಿರಗೊಳಿಸಿ, ಭಾವನೆಯ ಬಲದಿಂದ, ಭಾವಲೀನನಾಗಿ, ಧ್ಯಾನಲೋಲನಾಗಿ, ಭಕ್ತಿಭಾವದಿಂದ, ನ್ಯಾಯಧರ್ಮಗಳನ್ನು ಮಾಡುತ್ತಿರುವೆನು. ಕಾಯಲು, ಕೈಹಿಡಿದು ಕರೆದೆತ್ತಲು ಅನವರತ ರಕ್ಷಿಸಲು, ನನ್ನನ್ನುದ್ಧರಿಸಲು, ಶ್ರೀ ಶಂಕರಲಿಂಗ ದೇವನಿಹನು" ಎಂದು ಶ್ರೀ ಶಿವಲಿಂಗಪ್ಪನವರು ಈ ಕವನದಲ್ಲಿಯೂ ಆಧ್ಯಾತ್ಮದ ದಾರಿಯಲ್ಲಿ ವೀರಧೀರರಾಗಿ ಸಾಗಿಹರೆಂದು ಕಾಣುತ್ತದೆ. ]

---

## ಅಂತರಾತ್ಮನಿಗಾಗಿ—೧೧

### ಹೊಯ್ದು ಬಿಡು ಹೊಯ್ದು ಬಿಡು ! ಕಾಯ್ದಿಹುದು ಸುಕೃತವತಿ !

ಹೊಯ್ದು ಬಿಡು ಹೊಯ್ದು ಬಿಡು ! ಕಾಯ್ದಿಹುದು ಸುಕೃತವತಿ || ಪಲ್ಲ ||

ಧೃತಿ ವಜ್ರ ಮುಷ್ಟಿಯಿಂದಾಢ್ಯ ಮಾಯೆಯಿಂದೆತ್ತಿ |
ಬಯಸದಾಕೃತಿ ರೂಪುಗೊಳುವ ನಿನ್ನ ಮನದಂತಃಸ್ಥಿತಿ |
ಹೊಯ್ದು ಬಿಡು ಹೊಯ್ದು ಬಿಡು ! ಕಾಯ್ದಿಹುದು ಸುಕೃತವತಿ || ೧ ||

ಹೊಯ್ದು ಬಿಡು ಆತ್ಮವೇ ಈ ಸಂಧಿ ಸಿಗದಿನ್ನು |
ಬೆಚ್ಚದಿರು ಬೆದರದಿರು ಭವಬಾಳ ಘೋರನ್ನು |
ಹೊಯ್ದು ಬಿಡು ......................|| ೨ ||

ಗರಳದುರಿಯ ಸ್ಥಿರ ಶಾಂತಿಗೆ ನಿನ್ನ ಮುಂಜಾಗ್ರತೆಗೆ |
ಸುಕ್ಷೇತ್ರ ಸತ್ಪ್ರೀತ ಸಂದರ್ಶದಿಂ ಸುಫಲವು ನಿನಗೆ |
ಹೊಯ್ದು ಬಿಡು ………………|| ೩ ||

ತನ್ನವರ ನನ್ನವರ ಮಾಯದೆಡೆ ಸುಳಿಯದಿರು |
ಹಲವು ಹಂಬಲವನ್ನು ಮನದಲ್ಲಿ ತುಂಬದಿರು |
ಹೊಯ್ದು ಬಿಡು ………………|| ೪ ||

ಕಾಶಿಯಲಿ ಈಶ ವಿಶ್ವೇಶನಲಿ ವಿಶ್ವಾಸದಿಂದಿರು |
ಕಡು ಮೋಹದ ಮನವೆ ನೋಡು ನಿನ್ನಾಟವಾಡದಿರು |
ಹೊಯ್ದು ಬಿಡು ಹೊಯ್ದು ಬಿಡು! ಕಾಯ್ದಿಹುದು ಸುಕೃತವತಿ || ೫ ||

---

[ ಅಂತರಾತ್ಮನಿಗಾಗಿ ಹಾಡಿದ ಈ ಕೊನೆಯ ಕವನದಲ್ಲಿಯೂ ಆತ್ಮಾರ್ಥಿಯ ಅದೇ ಧೀರ ವೀರ ವಾಣಿ ಕೇಳಬರುತ್ತಿದೆ. ತಮ್ಮ ಅಂತರಾತ್ಮಕ್ಕೆ ಶ್ರೀ. ಶಿವಲಿಂಗಪ್ಪನವರು ಆವೇಶದಿಂದ ಹುರಿದುಂಬಿಸುತ್ತಿರುವರು ; " ಎಲೈ ಆತ್ಮವೇ, ಭಗವಂತನ ಕರುಣೆಯ ಕಾವಿನಿಂದ ನನ್ನ ಬಾಳು ಕಾದ ಕಬ್ಬಿಣದಂತಾಗಿರುವದು. ನಿನ್ನ ಉದ್ಧಾರದ ಪುಣ್ಯಪರ್ವ, ಸುಕೃತದ ಸುಯೋಗ ಬಂದಿದೆ. ಬಾಳಿನ ಈ ಕಾದ ಕಬ್ಬಿಣವನ್ನು ಹೊಯ್ದು ಹೊಯ್ದು ಭಗವಂತನ ಪಾದದಲ್ಲಿ ಅರ್ಪಿಸಲು ಅರ್ಹವಾಗುವ ಮೂರ್ತಿಯನ್ನಾಗಿಸು. ತನ್ನವರ ನನ್ನವರ ಮೋಹ ಮಾಯೆ ಯತ್ತ ಸುಳಿಯದಿರು. ಹಲವು ಹಂಬಲವ ಮನದಲ್ಲಿ ತುಂಬದಿರು, ನಾನು ನನ್ನದೆಂಬ ನನ್ನಿಯ ನಿನ್ನಾಟವನ್ನಾಡದಿರು, ಚಿನ್ನಾಟವನಾಡದಿರು. ಕಾಶಿಯಲ್ಲಿರುವ ವಿಶ್ವೇಶನಲ್ಲಿ ವಿಶ್ವಾಸ ದಿಂದಿರು. ಶ್ರದ್ಧೆಯಿಂದ ಶಿವನ ಅಡಿಯಲ್ಲಿ ಅರ್ಪಿತನಾಗು."]

---

# ಶ್ರೀಶಿವಲಿಂಗಸಂಗತರಂಗ

ಃ

## ಪರಮಾತ್ಮನಿಗಾಗಿ—೧



**ಶಿವನೆಲ್ಲಿ ? ಶಿವನೆಲ್ಲಿ ? ಶಿವನಿರದ ಜಗವೆಲ್ಲಿ ?**

ಶಿವನೆಲ್ಲಿ? ಶಿವನೆಲ್ಲಿ? ಶಿವನಿರದ ಜಗವೆಲ್ಲಿ ॥ ಪಲ್ಲ ॥

ಹೃದಯವರಮಂದಿರದ । ಒಳಗರ್ಭಗುಡಿಯಲ್ಲಿ ।
ಮೃದು ಮಧುರ ಮಾತಿರುವ । ಮಧುಬಿಂಬತಟದಲ್ಲಿ ।
ನನ್ನಲ್ಲಿ ನಿಮ್ಮಲ್ಲಿ । ನಾನೆಂಬ ವಿಷವಿರದ ।
ಭಾವನೆಯ ಬನದಲ್ಲಿ । ಭಯಭಕ್ತಿ ನಿಜಶಕ್ತಿ ।

ಹಸಿವೆಂಬ ಮುಸಿಯಲ್ಲಿ | ಉಪವಾಸ ವನವಾಸ |
ಸುಡುತಿರಲು ನಿನ್ನನ್ನು | ಓಜಸ್ಸು ತೇಜಸ್ಸು |
ಚಿರಶಾಂತಿಗದು ಲೇಸು | ಅದು ನೋಡು ಅದು ನೋಡು |
ಅದರಂತೆ ಹದಮಾಡು | ಮನವನ್ನು ಮಿದುಮಾಡು |
ಮೌನದಲಿ ನುಡಿ ನೀಸು | ನುಡಿಯಲ್ಲಿ ಅಡಗಿಹನು |
ನಿನ್ನಾತ್ಮನನು ನೋಡು | ನಿಜವಾದ ವರಬೇಡು |
ಒಳಗಣ್ಣು ತೆರೆನೋಡು | ನೋಡತ್ತ ನೀ ಹಾಡು |
ಹಾಡಿನಲಿ ನಯವಿರಲಿ | ಹಾಡಿನಲಿ ಸವಿಯಿರಲಿ |
ಪಾಡು ಹಾಡಿನೊಳಿರಲಿ | ಹಾಡು ನಾಡಿಯೊಳಿರಲಿ |
ನಾಡಿನೊಳು ಮಿತಿಯಿರಲಿ | ಮಿತಿಗೊಂದು ಗತಿಬೇಕು |
ಗತಿಗೊಂದು ಮತಿಸಾಕು | ಮತಿಯೇ ಮುಕ್ತಿಗೆ ಮಾರ್ಗ |
ಮತಿಯಿಲ್ಲದವನ ಗತಿ | ಚಿರಕಾಲ ಅಧೋಗತಿ |
ಶಿವನೆಲ್ಲಿ? ಶಿವನೆಲ್ಲಿ? ಅವನಿರದ ಜಗವೆಲ್ಲಿ?

---

[ ಈ ಕೊನೆಯ ಭಾಗದಲ್ಲಿರುವ ನಾಲ್ಕು ಕವನಗಳಲ್ಲಿ ಪರಮಾತ್ಮನಿಗಾಗಿ ಹಂಬಲವೇ ಹೆಚ್ಚಿದೆ ಕವನಕಾರರಲ್ಲಿ. "ಶಿವನೆಲ್ಲಿ ? ಶಿವನೆಲ್ಲಿ" ಎಂದು ಶಿವನನ್ನು ಅರಸುತ್ತ ಹೃದಯದ ಮಂದಿರದಲ್ಲಿ ಅಹಂಕಾರದ ಮುಬ್ಬು ಮುಸುಕಿನಲ್ಲಿ, ನನ್ನಲ್ಲಿ ನಿಮ್ಮಲ್ಲಿ, ಕಷ್ಟಕಾರ್ಪಣ್ಯಗಳಲ್ಲಿ, ಎಲ್ಲೆಲ್ಲಿಯೂ ಒಳಗಣ್ಣು ತೆರೆದು ನೋಡು, ಶಿವನು ಸಿಕ್ಕುವನು, ಶಿವನಿರದ ಜಗವೆಲ್ಲಿ? ಎಂದು ಕವನಕಾರರು ತಮ್ಮ ಶಿವಾನುಭವವನ್ನು ಸಾರಿರುವರು. ]

---

## ಪರಮಾತ್ಮನಿಗಾಗಿ—೨

### ಶಿವಧ್ಯಾನವೆನಗಿರಲಿ ಶಿವಲಿಂಗ ಕರುಣಿಸಲಿ

ಮಾತೇಕೆ ಕೃತಿಯಿರಲಿ ಕೃತಿಯಲ್ಲಿ ಸೊಬಗಿರಲಿ |
ಹೂವಾಗಿ ಶೋಭಿಸುವ ತರುಲತೆಗಳಂತೆ | ||೧||

ಹಟವೇಕೆ ದಿಟವಿರಲಿ ದಿಟದಲ್ಲಿ ಮನವಿರಲಿ |
ಶಿಶುವು ತಾ ತಾಯಿಗದು ಹಂಬಲಿಸುವಂತೆ ||೨||

ಎರಡೇಕೆ ಒಂದಿರಲಿ ಹೊಂದಿಕೆಯು ಹೊಲಬಿರಲಿ |
ಹಣ್ಣಿನಲಿ ಬೆರೆತಿರುವ ಮಧುರ ರಸದಂತೆ ||೩||

ಬುದ್ಧಿ ಕೆಡದಿರಲಿ ಶ್ರದ್ಧೆ ಬೆಳೆಯುತ್ತಿರಲಿ |
ಬದ್ಧಕಂಕಣರಾಗಿ ಬೆವರ ಸುರಿಸುವ ಶ್ರಮಜೀವಿಯಂತೆ || ೪ ||

ಒಳಹೊರಗಿರದಿರಲಿ ಒಳಭಾವ ಶುದ್ಧವಿರಲಿ |
ಒಳಿತಾತ್ಮಗಳ ಒಳ ಆತ್ಮ ಒಪ್ಪುತಿರುವಂತೆ || ೫ ||

ಶಿವಧ್ಯಾನವೆನಗಿರಲಿ ಶಿವಲಿಂಗ ಕರುಣಿಸಲಿ |
ಜಡೆಯ ಶಂಕರಲಿಂಗ ಅನುಗ್ರಹಿಸುವಂತೆ || ೬ ||

---

[ ಮಾತು ಬೇಡ, ಸೊಬಗಿನ ಕೃತಿಯಿರಲಿ, ಹಟ ಬೇಡ, ದಿಟದಲ್ಲಿ ಮನ ಮಗ್ನವಾಗಲಿ, ದ್ವಿಧಾಭಾವ ಅಳಿಯಲಿ, ಸರ್ವೈಕ್ಯಭಾವ ಬೆಳೆಯಲಿ, ಬುದ್ಧಿಯ ಬಲ ಬೇಡ, ಶ್ರದ್ಧೆಯ ಬಲ ವಿರಲಿ, ಒಳಗೊಂದು ಹೊರಗೊಂದು ಹೀಗೆ ವಂಚಕತನ ಬೇಡ, ಅಂತರಾತ್ಮಶುದ್ಧವಿರಲಿ, ಮೇಲಾಗಿ ಇವೆಲ್ಲದರಿಂದ ಸುಲಭ ಸಾಧ್ಯನಾದ ಶಿವನಧ್ಯಾನ ನನಗಿರಲಿ, ಶಿವಲಿಂಗ ಕರುಣಿಸಲಿ ಎಂದು ಈ ಕವನದಲ್ಲಿ ಕವನಕಾರು ತಮ್ಮ ಆತ್ಮದ ಹಂಬಲವನ್ನು ರೂಪಿಸಿರುವರು. ]

---

## ಪರಮಾತ್ಮನಿಗಾಗಿ—೩

### ಬೇಗ ಕರುಣಿಸೈ ಗುರುದೇವ ನಿಮ್ಮಡಿಯೊಳಾಸಕ್ತಿ !

ಕೊನೆವರೆಗು ನಿಶ್ಚಲದಿ ತವ ಪಾವನಾಂಘ್ರಿಯಲಿ |
ಅಮರಪರಮಾನಂದಲೀನತೆಯ ಬಯಸುವೆನು |
ಓ ದೇವ! ಮುರುಘೇಶ ಕರುಣಾಳು ನೀನೆನ್ನ |
ಹಿಡಿವ ಕೈ ಬಿಡದಿರೈ ಎನ್ನಾತ್ಮನೊಡೆಯಾ || ೧ ||

ಹಿಂದುಳಿಸಿ ಬಾಳನ್ನು ಸ್ಥಿರಗೊಳಿಸಿ ಸರ್ವಾತ್ಮ |
ಭಕ್ತಿಯನು ಬಲಿಸುತ್ತೆ ನಿನ್ನಡಿಯ ಜಪಿಸುತ್ತೆ |
ಶ್ರೀದೇವ ಜಯದೇವ ಮುರುಘೇಶನಡಿಯಲ್ಲಿ |
ಭಕ್ತಿಯಿಂ ಶ್ರದ್ಧೆಯಿಂ ಭಾವ ಪರಿಶುದ್ಧಿಸುತೆ || ೨ ||

ಶ್ರೀಗುರುವೆ ವರಭಕ್ತಿ ಸ್ಥಿರಗೊಳಿಸಿ ಮುಕ್ತಿ |
ಭೋಗ ಮೋಕ್ಷಾರ್ಥಂಗಳ ಬಗೆಗೊಂಬ ನಿಜ ಯುಕ್ತಿ |

ಯೋಗಿಜನ ಶಿವಶರಣರೊಲಿಸುವಾ ದಿವ್ಯಶಕ್ತಿ |
ಬೇಗ ಕರುಣಿಸೈ ಗುರುದೇವ ನಿಮ್ಮಡಿಯೊಳಾಸಕ್ತಿ || ೭ ||

---

[ ತಮ್ಮ ಆತ್ಮದ ಆಧ್ಯಾತ್ಮಯಾತ್ರೆ ಸುಗಮ ಮತ್ತು ಸಫಲವಾಗಬೇಕಾದರೆ ಗುರುಕರುಣೆ ಬೇಕು ಎಂದು ಮನಗಂಡು ಕವನಕಾರರು ಈ ಕವನದಲ್ಲಿ " ಗುರುದೇವ, ನಿಮ್ಮಡಿಯೊಳಾಸಕ್ತಿಯನ್ನು ನೀಡು. ನನ್ನ ಕೈಹಿಡಿದು ಕರೆದೊಯ್ದು, ಭಕ್ತಿಪಥದಲ್ಲಿ ನಡಿಸಿ, ಭಾವ ಶುದ್ಧಿಯಾಗಿಸಿ, ನಾನು ಬಯಸುವ ಅಮರಪರಮಾನಂದಲೀನತೆ ನನ್ನದಾಗುವಂತೆ ಕರುಣಿಸು " ಎಂದು ಗುರು ಮುರುಘೇಶನನ್ನು ಹಂಬಲಿಸುತ್ತಾ ಬೇಡಿಕೊಂಡಿರುವರು.]

---

## ಪರಮಾತ್ಮನಿಗಾಗಿ—೪

### ನಮೋ ಮರಣ ಮಾರಣಾ

ನಾದ ತಾಯೆ ನುಡಿಯ ತಾಯಿ |
ಮರೆಯೆ ನಾನು ನಿನ್ನ ಋಣಾ
ನನ್ನ ಎದೆಯ ಗುಡಿಯ ಕದಕೆ |
ನಿನ್ನ ವಚನ ತೋರಣಾ || ೧ ||

ತಮೋಹಾರಿ ಆತ್ಮದ್ವಾರಿ |
ನಿತ್ಯ ಭಸ್ಮ ಧಾರಣಾ |
ಧರ್ಮರಾಶಿ ಜಗಜ್ಯೋತಿ |
ಆತ್ಮಮೋಕ್ಷಕಾರಣಾ || ೨ ||

ಭಕ್ತಕರುಣ ಸತ್ಯಶರಣ |
ಮಧುರ ನುಡಿಯ ಧಾರಣಾ |
ವಿನಯಭರಣ ಕಾಯತರುಣ |
ಅಹಿಂಸಾಮೃತಪೂರಣಾ | || ೩ ||

ಇಳೆಗೆ ಸುಳಿದು ಕೊಳೆಯ ಕಳೆದು |
ಪೂರ್ಣನಾದೆ ಬಸವನೆ |
ದಿವ್ಯನಾದೆ ಪೂಜ್ಯನಾದೆ |
ನಿತ್ಯಮುಕ್ತಪಾವನಾ || ೪ ||

ನಿಸ್ಸ ನಡೆಗೆ ಅಮೃತ ನುಡಿಗೆ |
ನನ್ನ ಮನವೆ ವಾಹನಾ |
ಜನನ ಮರಣ ಅರಿದ ಶರಣ |
ನಮೋ ಮರಣ ಮಾರಣಾ || ೫ ||

---

[ ಇದು ಚರಮಗೀತೆ. ಮೊದಲು ಮಾತೃಭೂಮಿಯನ್ನು ನೆನೆದು ನಮಿಸಿ, ಆ ಮೇಲೆ ದೇವಿ ಸರಸ್ವತಿಯನ್ನು ಭಕ್ತಿಯಿಂದ ಸ್ಮರಿಸಿ, ನಂತರ ಜಗಜ್ಜ್ಯೋತಿ ಬಸವೇಶ್ವರರನ್ನು ಭಕ್ತ ಕರುಣನೆಂದು ಸತ್ಯಶರಣನೆಂದು ನಿತ್ಯಮುಕ್ತಪಾವನನೆಂದು ಹಾಡಿ ಕೊನೆಗೆ " ನಮೋ ಮರಣ ಮಾರಣಾ " ಎಂದು ಮೃತ್ಯುಂಜಯನಾದ ಭಗವಾನ್ ಶಿವಶಂಕರನನ್ನು ಆವಾಹನ ಮಾಡಿರುವರು ಕವನಕಾರರು. ಶಿವಾನುಭವವೇ ಅವರ ಬಾಳಿನ ಕೊನೆಯ ಗುರಿ. ಅದನ್ನು ಕುರಿತು ಈ ಕೊನೆಯ ಕವನವನ್ನು ಹಾಡಿರುವರು. ಶಿವಾನುಭವವು ಅವರಿಗೆ ಸಿದ್ಧಿಸಿರಲು ಸಾಕು ಎಂದು ತೋರುತ್ತದೆ. ]

---

" ಪುಟದ ಮೇಲೆ ಪುಟವನ್ನು ಓದೋದುತ್ತ ಅದರ ಸ್ವಾರಸ್ಯ ನನ್ನ ಮನಸ್ಸನ್ನು ಸೆಳೆಯಲು ನಾನು ಉಸಿರನೆಳೆಯುವುದನ್ನು ಸಹ ಮರೆತಂತಾಯಿತು."

ಬಂಗಾಲ —ಎಸ್. ಸಿ. ಸೇನ್‌ಗುಪ್ತಾ, ಎಮ್. ಎ.

" ಆಹಾ ! ಪುಟ್ಟದಾದರೂ ಅದ್ಭುತ ಸುಂದರ ಪುಸ್ತಕ !"

ಮುಂಬಯಿ —ಮುಶೀರ್ ತೈಯಿಬ್‌ಜಿ

" ವಿಜಾಪುರದ ವೈಭವವನ್ನು ಆಕರ್ಷಣೀಯ ಶೈಲಿಯಲ್ಲಿ ಅಜರಾಮರವಾಗಿ ಮಾಡಿದೆ ಈ ಪುಸ್ತಕ."

ನವದೆಹಲಿ —ಪ್ರೊಫೆಸರ್ ಎಲ್. ಎ. ನಟೇಶನ್

" ವಿಜಾಪುರದ ಸೌಂದರ್ಯವನ್ನು ಕಾವ್ಯವನ್ನು ಈ ಪುಸ್ತಕ ಜೀವಂತವಾಗಿಸಿದೆ. ವಿಜಾಪುರದ ಸೌಂದರ್ಯ ವೈಭವವನ್ನು ಕುರಿತ ಪ್ರಣಯಗೀತೆಯಾಗಿದೆ. ವಿಜಾಪುರವನ್ನು ಹಿಂದೆ ದಕ್ಷಿಣಾಪಥದ ರಾಣಿಯನ್ನಾಗಿ ಮಾಡಿದ ಅಂದಿನ ಆ ಮಹಾಜನರು ಈ ಪುಸ್ತಕವನ್ನು ಓದುವಾಗ ಮತ್ತೆ ಸಚೇತನರಾಗಿ ನಮ್ಮೆದುರಿನಲ್ಲಿ ನಿಲ್ಲುತ್ತಾರೆ. ಅವರನ್ನು ನಾವು ಕಣ್ಣಾರೆ ಕಾಣುತ್ತೇವೆ ಕಿವಿಯಾರೆ ಕೇಳುತ್ತೇವೆ......"

ಸ್ಪೇನದ ಲೇಖಿಕೆ — ಕಾವುಂಟೆಸ್ ಅಲ್ವಾರೆಜ್‌ದ ಟೋಲೆದೊ

" ವಿಷಯಮಂಡನ ಸ್ವಾರಸ್ಯವಾಗಿದೆ. . ಐತಿಹಾಸಿಕ ವಿವರಣೆ ಸಂಕ್ಷಿಪ್ತ ಮತ್ತು ಸತ್ಯಪೂರ್ಣವಾಗಿದೆ......"

—ಡಾಕ್ಟರ್ ಎಸ್. ಸಿ. ನಂದಿಮಠ, ಎಂ.ಎ.,ಪಿಎಚ್.ಡಿ.

" ವಿಷಯವಿವರಣೆ ಸ್ವಾರಸ್ಯವಾಗಿದೆ, ಹೃದಯಂಗಮವಾಗಿದೆ. ಭಾಷೆ ಅನುಗುಣವಾಗಿದೆ. ಚಿತ್ರ ಚಿತ್ತಾಕರ್ಷಕವಾಗಿವೆ. ಕಳೆದುಹೋದ ಕಾಲ ಇಂದು ಸಜೀವವಾಗಿ ಕಣ್ಮುಂದೆ ಕಟ್ಟಿದಂತಾಗುತ್ತದೆ. ವಾಚಕರ ಕುತೂಹಲವನ್ನು ಮತ್ತು ಕಲ್ಪನಾವಿಲಾಸವನ್ನು ಕೆರಳಿಸುತ್ತದೆ."

—ಆರ್. ಬಿ. ನಾಯಿಕ್, ಎಮ್.ಎ., ಎಲ್‌ಎಲ್.ಎಮ್.

Charmed by this booklet on the beauty and splendour of art and architecture. An open sesame to the Glory of Chalukyan art and architecture—crystallizes the multi-petalled beauty and grace of Chalukyan Architecture and Sculpture in a most inspiring and graphical way. This booklet is history written in a fine poetic style—it justifies the statement that 'history is both a science and an art.'

—Dr. H. T. Sasnur, M. A., Ph. D.

ಇತಿಹಾಸ, ಸಾಹಿತ್ಯ, ವ್ಯಕ್ತಿಚಿತ್ರ, ಕಲೆ, ಶಿಲ್ಪ ಎಲ್ಲವನ್ನೂ ಸಮರಸವಾಗಿ ಹೃದಯಂಗಮವಾಗಿ ಇಲ್ಲಿ ಸಾದರಪಡಿಸಲಾಗಿದೆ, ಎಂದು ಇನ್ನೂ ಅನೇಕ ರಸಿಕ ಮಹನೀಯರು ಅಭಿಪ್ರಾಯಪಟ್ಟಿರುವರು.

" ಕನ್ನಡ ನಾಡಿನ ಹೆಸರಾಂತ ಹರದರೂ ಕೃಷಿಕರೂ ಕಲಾಭಿಮಾನಿಗಳೂ ಕವಿಗಳೂ "ಧರ್ಮಧುರೀಣ" ಬಿರುದಾಂಕಿತರೂ ಆದ ವಿಜಾಪುರದ ಶ್ರೀಮಂತ ಶಿವಲಿಂಗಪ್ಪ ಸಂಗನಬಸಪ್ಪ ಹೆರಲಗಿ ಅವರು ಆಗಾಗ ತಮ್ಮ ಬಾಳುಬದುಕಿನಲ್ಲಿ ಒದಗಿದ ಭಾವಸ್ಫೂರ್ತಿಯಿಂದ ಬಾಳಿನ ಅನುಭವದಿಂದ, ಪರಾರ್ಥಬುದ್ಧಿಯಿಂದ ಪರಮಾರ್ಥಪ್ರೇರಣೆಯಿಂದ ಬರೆದಿಟ್ಟ ಬಿಡಿ ಹಾಡುಗಳನ್ನು ಶ್ರೀ ಪದ್ಮರಾಜ ಹುನಗುಂದ ಅವರು ಆತ್ಯಂತ ಅಕ್ಕರೆಯಿಂದ ಆಯ್ದು ನಲ್ವೆಸರುಗಳನ್ನು ನೆಯ್ದು ಅಯ್ದು ಹಸುಗೆಯಾಗಿಸಿ 'ಶ್ರೀಶಿವಲಿಂಗಸಂಗತರಂಗ' ಎಂಬ ಮುದ್ದಾದ ಹೆಸರಿಟ್ಟು ಪ್ರಕಟಿಸುತ್ತಿರುವದನ್ನು ತಿಳಿದು ಹೃದಯ ತುಂಬಿ ಬಂದಿದೆ. . .

"ಶ್ರೀಶಿವಲಿಂಗಸಂಗತರಂಗ" ಅಯ್ವತ್ತುನಾಲ್ಕು ತೆರೆಗಳಿಂದ ಕೂಡಿದೆ. ಸಾಗರದ ತರಂಗ ಸಹಸ್ರಾರವಿದ್ದರೂ ಅವೆಲ್ಲಕ್ಕೂ ಒಂದೇ ನಾಮ, ಒಂದೇ ರೂಪು, ಒಂದೇ ಕ್ರಿಯೆ. ಆದರೆ ಈ "ಶ್ರೀಶಿವಲಿಂಗಸಂಗ"ದ ತರಂಗಗಳು ಸಂಖ್ಯೆಯಲ್ಲಿ ಸೀಮಿತವಾಗಿದ್ದರೂ ನಾಮ, ರೂಪು ಕ್ರಿಯೆಗಳಲ್ಲಿ ಸೀಮಿತವಾಗಿಲ್ಲ. ಒಂದೊಂದು ತೆರೆಗೂ ಒಂದೊಂದು ಹೆಸರು. ಒಂದೊಂದು ಚೆಲುವು. ಒಂದೊಂದು ಬಗೆಯ ಕ್ರಿಯೆಗಳಿಂದ ಕಳೆಗೂಡಿವೆ. ಸಾಗರದ ತೆರೆಗಳಂತೆ ಇವು ಜಡವಾಗಿಲ್ಲ; ಜೀವಂತವಾಗಿವೆ, ಜ್ವಲಂತವಾಗಿವೆ. ಕಡಲ ತೆರೆಗಳಿಗಿಂತಲೂ ಬೆಡಗುಳ್ಳವಾಗಿವೆ; ಬಿನ್ನಾಣವುಳ್ಳವಾಗಿವೆ, ರಸಯೋಗವುಳ್ಳವಾಗಿವೆ, ಭಾವಾನುಭವಸಾರ ಸಂಪತ್ತುಳ್ಳವಾಗಿವೆ. . . . . . . . . . . . . . . .

ಇವು ಭಕ್ತನ ಭಾವಸಾಗರದ ತರಂಗಗಳು. ಆದ್ದರಿಂದ ಭಾವಸಂಪತ್ತು ಭಾವಸಂವಿತ್ತು ಇವುಗಳಲ್ಲಿ ತುಂಬಿ ಬಂದಿದೆ. ಜತೆಗೆ ಭಾವಸೌಂದರ್ಯವೂ ಬೆರೆದುಬಂದಿದೆ. ಭಾವಮಾಧುರ್ಯವೂ ತುಂಬಿ ನಿಂದಿದೆ. ಒಟ್ಟನಲ್ಲಿ ಭಾಷಾಶೈಲಿಯಲ್ಲಿ ಭಾವಶೀಲ ಧರ್ಮಗಳು ಬೆಸುಗೆಯಾಗಿವೆ.

× × × × ×

ಇಂತಹ ಉತ್ತಮವಾದ 'ಶಿವಲಿಂಗಸಂಗತರಂಗ' ಎಂಬ ಕವನಸಂಕಲನಕೃತಿಯನ್ನು ಸಂಪಾದಿಸಿದ ಶ್ರೀ ಪದ್ಮರಾಜ ಹುನಗುಂದ ಅವರ ಶ್ರಮ ಸಾರ್ಥಕವಾಗಿದೆ. ಕವನರೂಪ ತರಂಗತರಂಗಕ್ಕೂ ಇವರು ಕೊಟ್ಟ ಮುಡಿ (ತಲೆ) ಕಟ್ಟು ಮತ್ತು ಅಡಿಟಪ್ಪಣೆಗಳಲ್ಲಿ ಇವರ ಜಾಣ್ಮೆಯನ್ನು ಕಾಣಬಹುದಾಗಿದೆ. ತರಂಗ ತರಂಗದ ಅಂತರಂಗವನ್ನು ಅರೆಕೊರೆಯಿಲ್ಲದಂತೆ ಅರಿತಿದ್ದಾರೆ. ಅರಿತಿದ್ದನ್ನು ಅಚ್ಚುಮೆಚ್ಚಾಗಿ ಬರೆದು ರೂಪಿಸಿದ್ದಾರೆ. ಕವನಗಳ ಭಾವವನ್ನರಿಯಲು ಓದುಗರಿಗೆ ಇವರ ಅಡಿಟಪ್ಪಣೆಯು ಸಹಾಯಕವಾಗಿದೆ. ಸಂಪಾದಕರು ತಮ್ಮ ನಿವೇದನೆಯಲ್ಲಿ ಕವಿಗೂ ತಮಗೂ ಇರುವ ಸಂಬಂಧವನ್ನು ಮತ್ತು ಕವಿಯ ವ್ಯಕ್ತಿವೈಶಿಷ್ಟ್ಯವನ್ನು ಚೆನ್ನಾಗಿ ವ್ಯಕ್ತಗೊಳಿಸಿದ್ದಾರೆ. ಮತ್ತು ತಾವು ಗ್ರಂಥದಲ್ಲಿ ಮಾಡಿದ ಅಯ್ದು ವಿಭಾಗಗಳ ಔಚಿತ್ಯವನ್ನು ಭಾವವೈಶಾಲ್ಯವನ್ನು ಬಿಚ್ಚಿ ತೋರಿಸಿದ್ದಾರೆ.

ಕವಿ ಶಿವಲಿಂಗದ ಕರುಣಾಂಬುಧಿ ತರಂಗಗಳನ್ನು ತನ್ನ ಕವನಗಳಲ್ಲಿ ರೂಪಿಸಿದ್ದರೆ ಸಂಪಾದಕರು ಕವಿ ಕವನಗಳಲ್ಲಿರುವ ಭಾವತರಂಗಗಳನ್ನು ತಮ್ಮ ಅಡಿಟಪ್ಪಣಿಗಳಲ್ಲಿ ಅಂದವಾಗಿ ಅಳವಡಿಸಿದ್ದಾರೆ. ಉಭಯರು ಇದನ್ನು ಕನ್ನಡನುಡಿಗಡಲಲ್ಲಿ ನಿಡುಗಾಲ ರಾಜಿಸುವ ರಸಪೂರ್ಣತರಂಗವನ್ನಾಗಿಸಿದ್ದಾರೆ. . . . . . . . . . . . . .

ಕವಿಭಾವತರಂಗದಲ್ಲಿ ವಿಹರಿಸಿದ ಪದ್ಮರಾಜ ಹಂಸದ್ವನಿಯು
ಅನಂತ ಮನ್ವಂತರ ಮೊರೆಯುತ್ತಿರಲಿ. "

× × × × ×

ಶ್ರೀಮನ್ನಿಡುಮಾಮಿಡಿ ಶ್ರೀಶೈಲಸಿಂಹಾಸನಾಧೀಶ್ವರ
ಜಗದ್ಗುರು ಶ್ರೀಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ

"ನೆಚ್ಚುಗೆಯ ನಲ್ನುಡಿ"ಯಿಂದ—